ಶ್ರೀ

ಶ್ರೀ ಶಾರದಾಮ್ಬಾಯೈನಮಃ.

ಮಹಾಕವಿ ಕಾಳಿದಾಸಕೃತ ರಘುವಂಶ ಮಹಾಕಾವ್ಯವೇ

ಈ

# ರಘುಕುಲ ಚರಿತಂ

(೧ ನೆಯಭಾಗ—೮ಸರ್ಗ)

ದೊಡ್ಡಬೆಲೆ
ನಾ ರಾ ಯ ಣ ಶಾ ಸ್ತ್ರಿ ಯಿಂ ದ
ಬರೆಯಲ್ಪಟ್ಟು



ಶ್ರೀ ಚೌಡೇಶ್ವರೀ ಮುದ್ರಾಲಯದಲ್ಲಿ ಮುದ್ರಣಂಗೊಂಡು
ಪ್ರಚುರವಾದುದು

ದ್ವಿತೀಯಮುದ್ರಣ (೨, ೫೦೦)

1923.


ಬೆಂಗಳೂರು.

# ಕಥಾಮುಖಂ.



ಈ ಭೂಮಂಡಲದಲ್ಲಿ ಸರಸಕವಿತಾಸಾಮ್ರಾಜ್ಯ ಸಾರ್ವಭೌಮನೆಂದರೆ ಕಾಳಿದಾಸ ಮಹಾಕವಿಯೊಬ್ಬನಲ್ಲದೆ ಬೇರಾರೂ ಅಲ್ಲ. ಇದರಿಂದ ಇತರ ಮಹಾ ಕವಿಗಳಿಗೆ ದೂಷಣೆಯಿಲ್ಲ. ಎಷ್ಟೋಮಂದಿ ಮಹಾಕವಿಗಳೂ ಇದ್ದಾರೆ. ಅವರೊಳಗೆ ಈತನು ಪ್ರಥಮಗಣನೀಯನೆನಿಸಿದ್ದಾನೆ:—

ಶ್ಲೋ॥ ಪುರಾ ಕವೀನಾಂ ಗಣನಾ ಪ್ರಸಂಗೇ ।
ಕನಿಷ್ಠಿಕಾ ಧಿಷ್ಠಿತ ಕಾಳಿದಾಸಾ ॥
ಅದ್ಯಾಪಿ ತತ್ತುಲ್ಯ ಕವೇ ರಭಾವಾತ್ ।
ಅನಾಮಿಕಾ ಸಾರ್ಥವತೀ ಬಭೂವ ॥

"ಪೂರ್ವ ಕವಿಗಳೊಳಗೆ ಹೆಸರುವಾಸಿಯಲ್ಲಿ ಮೊದಲನೆಯವರಾರು? ಎಂದು ಕೈಬೆರಳುಗಳಿಂದ ಲೆಕ್ಕ ಮಾಡಲಿಕ್ಕೆ ಹೊರಟಾಗ—ಮೊಟ್ಟಮೊದಲು ಕಿರಿಬೆರಳು, ಕಾಳಿದಾಸನ ಹೆಸರಿಗಾಸರೆಯಾಯಿತು ಬಳಿಕ ಆತನಿಗೆಣೆಯಾದ ಮತ್ತೊಬ್ಬ ಕವಿಯ ಹೆಸರಾವುದು? ಎಂದು ಎಣಿಕೆ ಮಾಡುವಲ್ಲಿ - ಇಂದಿನವರೆಗೆ ನೋಡುತ್ತ ಬಂದರೂ ಕಿರಿಬೆರಳಿನಂತೆ ಮುಂದಿಸಿ ಎಣಿಸಲಿಕ್ಕೆ ಕಾಳಿದಾಸನಿಗೆ ಸಮಾನನಾದ ಕವಿಯ ಹೆಸರೇ ದೊರೆಯದೆ ಹೋದುದರಿಂದ, ಕಿರಿಬೆರಳಿನ ಪಕ್ಕದ ಬೆರಳಿಗೆ ಅನಾಮಿಕೆಯೆಂದಿದ್ದ ರೂಢನಾಮವು ಅನ್ವರ್ಥನಾಮವಾಯಿತು" ಎಂದು ಕಾಳಿದಾಸ ಕವಿಯ ವಿಷಯವಾದ ಶ್ಲಾಘಾಶ್ಲೋಕವು ಲೋಕದಲ್ಲಿ ವಾಡಿಕೆಯಾಗಿದೆ. ಷೇಕ್ಸ್‌ಪಿಯರ್ ಕವಿಯ ಹೆಸರಿನಂತೆ ಕಾಳಿದಾಸನ ಹೆಸರೂ ಈ ದೇಶದಲ್ಲಿ ಮಾತ್ರವಲ್ಲದೆ ದೇಶಾಂತರಗಳಲ್ಲಿಯೂ ಪ್ರಸಿದ್ಧಿಗೊಂಡಿದೆ.

ಕವಿತಾಕಾಂತೆಗೆ ಚೋರಕವಿಯು ಮುಂಗುರುಳು, ಮಯೂರನು ಕರ್ಣಾಭರಣ, ಭಾಸನೇ ಹಾಸ, ಕವಿಕುಲಗುರುವಾದ ಕಾಳಿದಾಸನೇ ವಿಲಾಸ, ಹರ್ಷನೇ ಹರ್ಷ, ಬಾಣನೇ ಹೃದಯಗತನಾದ ಪಂಚಬಾಣ, ಇಂತಹ ಕಮನೀಯಳಾದ ಈ ಕವಿತಾಕಾಂತೆಯು ಯಾರಿಗೆ ಕೌತುಕವನ್ನುಂಟುಮಾಡದಿರುವಳು? ಎಂದು ಜಯದೇವ ಕವಿಯು ಕಾಳಿದಾಸನಿಗೆ ವಿಶೇಷ ಮಾನ್ಯತೆಯನ್ನು ಕೊಟ್ಟಿದ್ದಾನೆ.

ಇಂತಹ ಮಹಾಪುರುಷನ ಜನ್ಮಚರಿತ್ರೆಯು ತತ್ವತಃ ದೊರೆಯದಿರುವುದು ಬಹು ಶೋಚನೀಯವಾಗಿದೆ. ಬಹುಮಂದಿ ವಿದ್ವಾಂಸರು ಇದನ್ನು ಕಂಡುಹಿಡಿಯಲು ಬಹುಧಾ ಪ್ರಯತ್ನಿಸಿ, ಬಗೆಬಗೆಯಾಗಿ ತರ್ಕಿಸಿ ಇದ್ದಾರೆ ಅಂಥವರೊಳಗೆ ಈತನ ಕಾಲತತ್ವಾನ್ವೇಷಣೆಯ ವಿಷಯದಲ್ಲಿ ಮ॥ ಗುರುನಾಥ ವೆಂಕಟೇಶ ಕಿತ್ತೂರೆ ಬಿ.ಎ., ಡೆಪ್ಯುಟಿ ಇನಸ್ಪೆಕ್ಟರ್ ಧಾರವಾಡ, ಇವರು—ಕರ್ಣಾಟಕ ವಾಗ್ಭೂಷಣ ಭೂಷಣರೆನಿಸಿ, ಬಹು ಶೋಧಕರಾದ ಮಹಾಪಂಡಿತರ ತರ್ಕಗಳನ್ನೆಲ್ಲ ಕ್ರಮವಾಗಿ ಉದಹರಿಸಿ, ಕಟ್ಟಕಡೆಗೆ ಕ್ರಿ. ಪೂ. ೧೫೪ನೆಯ ಇಸವಿ ಅಥವಾ ಕ್ರಿ. ಶ. ೭೮ನೆಯ ಇಸವಿಯು ಬಹುಶಃ ಸರಿಯಾದ ತರ್ಕವೆಂತಲೂ, ಅಜರಾಮರಯಶಶ್ಶರೀರನಾದ ಈ ಮಹಾಕವಿಯು ವಿಕ್ರಮಭೋಜನ ಸಭಾ ಜೀವರತ್ನವಾಗಿದ್ದದ್ದು ಸಂಗತವೆಂದು ಅಂಗೀಕಾರ್ಯವೆಂತಲೂ ಅಭಿಪ್ರಾಯಪಟ್ಟಿದ್ದಾರೆ. ಕವಿಪಿತಾಮಹನ ಕಾವ್ಯನಾಟಕ ರೂಪ ಸೃಷ್ಟಿಕಾರ್ಯಗಳೊಳಗೆ ರಘುವಂಶ ಮಹಾಕಾವ್ಯವು ರಸದ ಪುಷ್ಟಿಯಾಗಿದೆ ಎಂದೂ ಉದಹರಿಸಿ ಇದ್ದಾರೆ.

ಈ ರಘುವಂಶ ಕಾವ್ಯವು ೧೯ ಸರ್ಗಗಳುಳ್ಳದ್ದಾಗಿ, ಸೂರ್ಯವಂಶದಲ್ಲಿ ಜನಿಸಿದ ದಿಲೀಪ, ರಘು, ಅಜ, ದಶರಥ, ರಾಮ, ಕುಶ, ಅತಿಥಿ, ನಿಷಧ, ನಲ, ನಭಶ್ಶಬ್ದ, ಪುಂಡರೀಕ, ಕ್ಷೇಮಧನ್ವ, ದೇವಾನೀಕ, ಅಹೀನಗು, ಪಾರಿಯಾತ್ರ, ಶಿಲ, ಉನ್ನಾಭ, ವಜ್ರನಾಭ, ಶಂಖಣ, ವ್ಯುಶಿತಾಶ್ವ, ವಿಶ್ವಸಹ, ಹಿರಣ್ಯನಾಭ, ಕೌಸಲ್ಯ, ಬ್ರಹ್ಮಿಷ್ಠ, ಪುತ್ರ, ಪೌಷ್ಯ, ಧ್ರುವಸಂಧಿ, ಸುದರ್ಶನ, ಅಗ್ನಿವರ್ಣರೆಂಬ ಮಹಾರಾಜರ ಚಿತ್ರಚರಿತ್ರೆಗಳನ್ನೊಳಗೊಂಡಿದೆ.

ಈ ಮಹಾಕಾವ್ಯಕ್ಕೆ (೧) ಮಲ್ಲಿನಾಥ (೨) ದಿನಕರ (೩) ವಲ್ಲಭ (೪) ಚಾರಿತ್ರವರ್ಧನ (೫) ಹೇಮಾದ್ರಿ (೬) ವಿಜಯಾನಂದ ಸೂರೀಶ್ವರ ಚರಣಸೇವಕ (೭) ವಿಜಯಗಣಿ (೮) ಪಂಡಿತ ಸುಮತಿವಿಜಯ (೯) ಬೃಹಸ್ಪತಿಮಿಶ್ರ (೧೦) ಭರತಸೇನ (೧೧) ದಕ್ಷಿಣಾವರ್ತ (೧೨) ನಾಥ (೧೩) ಧರ್ಮಮೇರು ಎಂಬ ಮಹಾಪಂಡಿತರುಗಳು ಟೀಕೆಗಳನ್ನು ರಚಿಸಿ ಇದ್ದಾರೆಂದು ತಿಳಿದುಬರುತ್ತದೆ, ಇದರಿಂದ ಕಾವ್ಯದ ಮಹತ್ವವೆಂಥದು ಎಂಬುದನ್ನು ವಾಚಕ ಮಹಾಶಯರು ಯೋಚಿಸಿ ತಿಳಿಯಬೇಕಾಗಿದೆ.

ಈ ಕಾವ್ಯದ ಕಥಾಭಾಗವು ದುಃಖ ಪರ್ಯವಸಾನವಾಗಿರುವದರಿಂದಲೂ, ನಮ್ಮ ಭಾರತ ಮಂಡಲದ ಕವಿಗಳು ಮಧುರರಸಸಮಾಪನದ ಪದ್ಧತಿಯನ್ನು ಅನುಸರಿಸಿ

ಇರುವುದರಿಂದಲೂ, ಕಥಾಸಂವಿಧಾನವು ಮುಗಿದಿರುವಂತೆ ಕಾಣಬರದಿರುವುದರಿಂದಲೂ, ೨೦—೨೨ನೆಯ ಸರ್ಗಗಳು ದೊರೆತಿರುವಂತೆ ತಿಳಿದುಬರುವುದರಿಂದಲೂ ೧೯ ಸರ್ಗಕ್ಕಿಂತಲೂ ಗ್ರಂಥವು ಹೆಚ್ಚಾಗಿರುವಂತೆ ತೋರುತ್ತದೆ.

"ಕಾಳಿಕಾಪುರಿಯಲ್ಲಿ ಕಾಳೀಯಶರ್ಮನೆಂಬಬ್ರಾಹ್ಮಣನಿಗೆ ಒಬ್ಬ ಕುಮಾರನಿದ್ದು, ಆ ಬಾಲಕನ ಮಾತಾಪಿತೃಗಳು ಸರ್ಪಹತರಾಗಿ ಒಂದೇ ದಿವಸ ದಿವಂಗತರಾದರು. ಅವರ ಪಶುಪಾಲಕನು ಈ ಶಿಶುವನ್ನು ಸಂರಕ್ಷಿಸುತ್ತಿದ್ದನು, ಆದೇಶದ ಅರಸಿನ ಮಗಳು ಎಂತಹರಾಜಕುಮಾರನನ್ನೂ ಪತಿಯನ್ನಾಗಿವರಿಸಲು ಒಪ್ಪದೆ ತಿರಸ್ಕರಿಸುತ್ತಿದ್ದಕಾರಣ, ರಾಜಮಂತ್ರಿಯು ಬೇಸರಪಟ್ಟು, ಒಂದುದಿವಸ ದನಗಳನ್ನು ಮೇಯಿಸುತ್ತಿದ್ದು ಸಾಯಂಕಾಲದ ಹೊತ್ತಿನಲ್ಲಿ ಬರುತ್ತಿದ್ದ ಈ ತರುಣನನ್ನು ಕಂಡು ಇವನಿಂದ ರಾಜ ಪುತ್ರಿಯನ್ನು ವಂಚಿಸಬೇಕೆಂದು ಬಗೆದನು. ಮಾರನೆಯದಿವಸ ಈ ಯುವಕನನ್ನು ವಸ್ತ್ರಾಭರಣಗಳಿಂದಲಂಕರಿಸಿ,ಆಪಟ್ಟಣದ ಪಂಡಿತರನ್ನೆಲ್ಲ ಅವನಶಿಷ್ಯರನ್ನಾಗಿಕಲ್ಪಿಸಿ, ರಾಜಾಸ್ಥಾನದಲ್ಲಿ ಆ ತರುಣನನ್ನು ಮೌನದಿಂದಿರುವಂತೆ ಕಟ್ಟುಮಾಡಿ ಶಿಷ್ಯರಿಗೂ, ರಾಜಕುಮಾರಿಗೂ, ಕಥಾಪ್ರಸಂಗವು ನಡೆದಬಳಿಕ ಅಂತೇವಾಸಿಗಳಿಂದ ಪರಾಜಿತಳಾದವಳು ಆಚಾರ್ಯನನ್ನು ಪರೀಕ್ಷಿಸಕೂಡದೆಂದು ನಿರೋಧಿಸಿ ವಿವಾಹ ಮಹೋತ್ಸವನನ್ನು ನೆರವೇರಿಸಿದನು, ತರುವಾಯ ವಂಚಿತಳಾದ ಭೂಪಾಲಪುತ್ರಿಯು ಆರಾತ್ರಿ ಪತಿಯನ್ನು ಕರೆದೊಯ್ದು, ಕಾಳಿಕಾದೇವಾಲಯದಲ್ಲಿ ದೇವತೆಯನ್ನು ಅರ್ಚಿಸಿ, ತನ್ನ ಶಿರವನ್ನು ಬಲಿಕೊಡಲು ಉದ್ಯುಕ್ತಳಾದಳು, ಪ್ರತ್ಯಕ್ಷಳಾದ ಮಹಾದೇವಿಯು ಆ ತರುಣನ ನಾಲಗೆಯಲ್ಲಿ "ಅಸ್ತಿಕಶ್ಚಿದ್ವಾಗ್ವಿಶೇಷಃ" ಎಂಬ ಅಕ್ಷರಗಳನ್ನು ಬರೆದಳು, ಆಮೇಲೆ ಜ್ಞಾನಸ್ನಾನವನ್ನು ಪಡೆದಕಾಳಿದಾಸನು - "ಅಸ್ತ್ಯುತ್ತರಸ್ಯಾಂದಿಶಿ ದೇವತಾತ್ಮಾ" ಎಂದು ಕುಮಾರಸಂಭವ ಕಾವ್ಯವನ್ನೂ, "ಕಶ್ಚಿತ್ಕಾಂತಾರಮಣ ವಸತಿಂ" ಎಂದು ಮೇಘದೂತವನ್ನೂ "ವಾಗರ್ಥಾವಿವ ಸಂಪೃಕ್ತೌ" ಎಂದು ರಘುವಂಶ ಕಾವ್ಯವನ್ನೂ, ವಿಶೇಷ ಶಬ್ದಾರಂಭದಿಂದ ಬೇರೊಂದು ಕಾವ್ಯವನ್ನೂ, ತತಶ್ಚ - ಶಾಕುಂತಲ, ವಿಕ್ರಮೋರ್ವಶೀಯ ಮೊದಲಾದ ೧೬ ಗ್ರಂಥಗಳನ್ನೂ ಬರೆದನಲ್ಲದೆ, ಪೂರ್ವ ಪತ್ನಿಯನ್ನು ಗೌರವಬುದ್ಧಿಯಿಂದ ಬಿಟ್ಟು, ದೇಶಾಟನಕ್ರಮದಿಂದವಿಕ್ರಮ ಭೋಜನಲ್ಲಿ ಬಂದು ಸೇರಿದನು" ಎಂದು ಕರ್ಣಾಕರ್ಣಿಕೆಯಾಗಿ ಬರುತ್ತಿರುವ ಅಜ್ಞಾತ ಮೂಲವಕ್ತೃಕವಾದ ಉದಂತಕಥೆಯು ಎಲ್ಲದೇಶಗಳಲ್ಲಿಯೂ ಹರಡಿಇದೆ, ಇಷ್ಟೇ ಹೊರತು, ಈತನಜನ್ಮಚರಿತ್ರೆಯು ಯಥಾರ್ಥವಾಗಿ ತಿಳಿದುಬಂದಿಲ್ಲ.

# ಉ ಪ ಹಾ ರ .

ಕನಡ, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆದು, ಶ್ರೀಮನ್ಮಹೀ ಶೂರ ಸಂಸ್ಥಾನದಲ್ಲಿ ವಿದ್ಯಾಭ್ಯಾಸದ ಇಲಾಖೆಯ ಇನಸ್ಪೆಕ್ಟರ್ ಜನರಲ್ ಪದವಿಯನ್ನು ಅಲಂಕರಿಸುತ್ತಾ, ದೇಶವತ್ಸರಾಗಿ, ಉದಾರಹೃದಯರೆನಿಸಿ, ಶಾಂತಿ, ಮಹತ್ವ, ರಾಜಭಕ್ತಿ, ಯಶಸ್ಸು, ರುಜುತ್ವ, ಏತದಾದ್ಯಸ್ಥಾನವಾಗಿರುವ ಶ್ರೀಮಾನ್ ಎಂ, ಶಾಮರಾಯರು, ಎಂ, ಎ, ಇವರು-ಕವಿಕುಲಲಲಾಮನಾದ ಕಾಳಿದಾಸ ಮಹಾಕವಿಯ ವಿಚಿತ್ರಸೃಷ್ಟಿಯಾಗಿರುವ ರಘುವಂಶ ಮಹಾಕಾವ್ಯದಲ್ಲಿನ ಮಧುರರಸವನ್ನು ಕನಡಿಗರು ಆಸ್ವಾದಿಸಿ ಆನಂದಿಸಲಿ,ಎಂಬದಾಗಿ ಅಪ್ಪಣೆ ಕೊಡಿಸಿದ್ದನ್ನು ಆದರ ಪೂರ್ವಕವಾಗಿ ಅಂಗೀಕರಿಸಿ, ಹತ್ತೊಂಭತ್ತು ಸರ್ಗಗಳ ಕಥೆಯನ್ನೂ ಕನ್ನಡ ಭಾಷೆಯಲ್ಲಿ ವಚನರೂಪದಿಂದ ಬರೆದೆನು. ಚೀಫ್ ಇಂಜನಿಯರ್, ರಾಜಸಭಾ ಭೂಷಣ, ಶ್ರೀಮಾನ್ ಕೆಪೂರ ಶ್ರೀನಿವಾಸರಾವ್,ಬಿ,ಎಸ್,ಸಿ,ಎಲ್,ಸಿ, ಇ, ಇವರ ಅಪ್ಪಣೆಯನ್ನನುಸರಿಸಿ ಸಂಸ್ಕೃತ ವಚನರೂಪದಲ್ಲಿ ಬರೆಯಲುಪ್ರಯತ್ನಿಸಿದೇನೆ. ಭ್ರಮಪ್ರಮಾದಗಳು ಮನುಷ್ಯ ಸಾಧಾರಣವಾಗಿರುವುದರಿಂದಲೂ, ಕೇವಲ ಗುಣವುಳ್ಳವೇ ಆಗಿಯಾಗಲಿ, ಅಥವಾ ದೋಷವುಳ್ಳವೇ ಆಗಿಯಾಗಲಿ ಇರುವ ವಿಷಯವೇ ಇಲ್ಲದಿರುವುದರಿಂದಲೂ, ದೋಷಜ್ಞರು ಗುಣಾಂಶ ಗ್ರಹಣದಿಂದ ಸಂತೋಷಿಸಬೇಕು ಎಂದು ಪ್ರಾರ್ಥಿಸುವ,

ಪ ರಿ ವ ರ್ತ ನ ಕಾ ರ.

## ದ್ವಿ ತೀ ಯ ಮು ದ್ರ ಣ ದ ವಿ ನಂ ತಿ.

ನಮ್ಮನಾಡಿನ ಭಾಷಾಭಿಮಾನಿಗಳಾದ ಧರ್ಮಬಾಂಧವರ ಉದಾರವಾದ ಆಶ್ರಯದಿಂದ ಪ್ರಥಮ ಮುದ್ರಣದ ಸಂಪುಟಗಳೆಲ್ಲವೆಚ್ಚವಾದುವು. ವಿದ್ಯಾಶಾಖೆಯ ಪ್ರಭುಗಳೂ ಟೆಕ್ಸ್ಟಬುಕ್ ಕಮಿಟಿಯವರೂ ದಯೆತೋರಿ ಶಾಲೆಗಳಲ್ಲಿ ಪಠ್ಯಪುಸ್ತಕವನ್ನಾಗಿ ನಿಯಮಿಸಿದ್ದರಿಂದ ಈ ದ್ವಿತೀಯ ಮುದ್ರಣಕ್ಕೆಪ್ರೋತ್ಸಾಹವು ದೊರೆಯಿತು,ಅವರೆಲ್ಲರಿಗೂ ವಿಧೇಯನಾಗಿ ಕೃತಜ್ಞತೆಯನ್ನು ಸಮರ್ಪಿಸುತಲಿದೇನೆ.

ದೊಡ್ಡಬೆಲೆ ನಾರಾಯಣಶಾಸ್ತ್ರಿ, ಆಸ್ಥಾನವಿದ್ವಾನ್

ಮತ್ತು ಪ್ರಧಾನಪಂಡಿತ, ವೆಸ್ಲಿಯನ್‌ಮಿಷನ್ ಕೊಲಜಿಯೆಟ್ ಹೈಸ್ಕೂಲ್

ಬೆಂಗಳೂರು ಸಿಟಿ.

ಶ್ರೀಃ.

ಶ್ರೀ ಶಾರದಾಂಬಾಯೈನಮಃ.

# ರಘುಕುಲ ಚರಿತಂ

-*ಪ್ರಥಮಾಧ್ಯಾಯಂ.*-



ಕಂದ॥ ವಾಗರ್ಥಂಗಳ ತೆರದಿಂ।
ದಾಗಳು ಮೊಡವೆರೆದು ತೋರ್ಪುವಾ ಪರಮೇಶ ।
ಗೀಗಳೆ ವಿಶ್ವಪಿತರ್ಗಂ ॥
ವಾಗರ್ಥ ಜ್ಞಾನಕಾಗಿ ಯಭಿ ನಮಿಸಿದಪೆಂ ॥

ಸೂಚನೆ॥ ವೈವಸ್ವತ ಕುಲ ದೇಳ್ಗೆಗೆ ।
ಭೂವಲ್ಲಭ ನಾ ದಿಲೀಪ ನರಸತಿಯಿಂದಂ ।
ಭಾವಿಸಿ ಗುರುವಂ ವಿಪಿನದೆ ।
ಸೇವಿಸೆ ತಾಂ ಮುನಿಯ ಸುರಭಿಯಂ ಪೊರೆವಟ್ಟಂ ॥

—*ಕಾಳಿದಾಸವಾಜ್ಮಯಂ*—

ಸೂರ್ಯನೇ ಮೂಲಪುರುಷನಾಗಿರುವ ರಘುಕುಲವು-ಬಹು ವಿಸ್ತಾರವಾಗಿದೆ, ಕೆಲವು ವಿಷಯಗಳನ್ನು ಮಾತ್ರವೇ ಬಲ್ಲ ನನ್ನ ಬುದ್ಧಿಯು ಆ ವಂಶದರಸರ ಚರಿತೆಯನ್ನು ವಿವರಿಸಿ ಹೇಳುವಷ್ಟು ಶಕ್ತವಾಗಿಲ್ಲ, ಹಾಗಿದ್ದರೂ ಆ ಕೆಲಸದಲ್ಲಿ ನಾನು ಉದ್ಯೋಗಿಸಿರುವುದು-ಸಣ್ಣದೋಣಿಯಿಂದ ದೊಡ್ಡಕಡಲನ್ನು ದಾಟಲಿಕ್ಕೆ ಪ್ರಯತ್ನಿಸುವಂತಹಾಗಿದೆ. ಈ ಮಹಾ ಕಾರ್ಯವನ್ನು ಮಹಾಕವಿಗಳು ಮಾಡಬೇಕು. ಅಲ್ಪಬುದ್ಧಿಯುಳ್ಳ ಈ ನಾನು-ಅವರ ಹೆಸರುವಾಸಿಯನ್ನು ಗಳಿಸಬೇಕೆಂದು ಒಯಸಿ, ಕೈಹಾಕುತ್ತಿರುವುದನ್ನು ನೋಡಿದರೆ, ಎತ್ತರವಾದ ಮನುಷ್ಯನ ಕೈಗೆ ಸಿಕ್ಕಬಹುದಾಗಿರುವ ಗಿಡದಲ್ಲಿನ ಹಣ್ಣಿಗೆ ಆಶೆಪಟ್ಟು ಕಯ್ಯನೆತ್ತಿದ ಗುಜ್ಜಾರಿಯಂತೆ ಜನರ ನಗೆ ಗೀಡಾಗುವುದೆಂದು ಕಾಣಬರುತ್ತದೆ.

‘ಹಾಗಾದರೆ-ಅಂತಹ ಕೈಲಾಗದ ಕೆಲಸಕ್ಕೆ ಏಕೆ ಪ್ರಯತ್ನಿಸಬೇಕು? ಸುಮ್ಮನಿರಬಹುದಲ್ಲ, ಎನ್ನಬಹುದು, ಆದರೆ-ವಜ್ರದ ಬೈರಿಗೆಯಿಂದ ರತ್ನವನ್ನು ಕೊರೆದರೆ ಆ ತೂಬಿನಲ್ಲಿ ದಾರವು ಒಳಹೊಗಲು ದಾರಿಯುಂಟಷ್ಟೆ? ಹಾಗೆಯೇ! ಪೂರ್ವಿಕರಾದ ವಾಲ್ಮೀಕಿಮುಂತಾದ ಮಹಾಕವಿಗಳು-ಆ ರಘುಕುಲದರಸರ ಚರಿತೆಯನ್ನು ಸ್ವಲ್ಪಮಟ್ಟಿಗೆ ವಿವರಿಸಿ ದಾರಿಯನ್ನು ಕಲ್ಪಿಸಿ (ತೋರಿ) ಇದಾರೆ. ನಾನೂ-ಅದೇ ಹಾದಿಯನ್ನು ಹಿಡಿದು ಮುಂದರಿಯಲು ಅವಕಾಶವುಂಟು, ಅದರಿಂದ ಆ ಕೆಲಸವನ್ನು ಕೈಗೊಂಡಿರುವೆನು.

ರಘುಕುಲದರಸರು ಸಾಮಾನ್ಯರಲ್ಲ:—ಹುಟ್ಟಿದಂದಿನಿಂದಲೂ ಬಹು ಪವಿತ್ರರಾದವರು, ಹಿಡಿದ ಕೆಲಸವು ಕೈಗೂಡುವವರೆಗೂ ಮಾಡಿ ಮುಗಿಸತಕ್ಕವರಲ್ಲದೆ ನಡುವೆ ಅಳುಕಿ ಕೈ ಬಿಡತಕ್ಕವರಲ್ಲ, ನಾಲ್ಕು ಕಡಲುಗಳ ನಡುವೆ ಇರುವ ಪೊಡವಿಯ ಒಡೆತನವೆಲ್ಲ ಅವರದೇ ಅಲ್ಲದೆ ಬೇರೊಬ್ಬರದಲ್ಲ. ಒಳ್ಗಜ್ಜಗಳನ್ನಸಗಿ ಆರ್ಜಿಸಿದ ಧರ್ಮವೆಂಬ ತೇರನ್ನೇರಿ, ಸ್ವರ್ಗಕ್ಕೆ ತೆರಳುವಾಗ ಅವರಹಾದಿಗೆ ಅಡ್ಡಿಯೇ ಇಲ್ಲ. ವಿಧಿಯನ್ನನುಸರಿಸಿಯೇ ಯಜ್ಞ ಯಾಗಾದಿಗಳನ್ನು ಮಾಡುತಲಿದ್ದರು. ಅವರ ಬಳಿಗೆ ಬಂದ ಯಾಚಕರು ತಮ್ಮ ಬಯಕೆಗೆ ಮೀರಿದ ಫಲವನ್ನು ಈಡೇರಿಸಿಕೊಂಡು ತೆರಳುತಲಿದ್ದರಲ್ಲದೆ ಕೊರತೆಯಿಂದ ಹಿಂದಿರುಗುತಲಿರಲಿಲ್ಲ. ಅವರ ಆಳ್ವಿಕೆಗೊಳಪಟ್ಟ ಪ್ರಜೆಗಳಲ್ಲಿ ಅಪರಾಧಿಗಳು ತಮ್ಮ ತಪ್ಪಿತಕ್ಕೆ ತಕ್ಕದಂಡನೆಯನ್ನು ಪಡೆಯುತಲಿದ್ದರು. ಆ ಪೊಡವಿಯಾಣ್ಮರು-ಕಾಲವನ್ನರಿತು ಎಚ್ಚರದಪ್ಪದೆ ಹಂಚಿಕೆಯಿಂದ ಕೆಲಸಗಳನ್ನು ಮಾಡುತಲಿರುವರಲ್ಲದೆ, ಸೋಮಾರಿಗಳಾಗಿಯಾಗಲಿ, ಮದೋನ್ಮತ್ತರಾಗಿಯಾಗಲಿ ಇದ್ದವರಲ್ಲ. ಇಂತಾ ಮನುವಂಶದ ಮಹಾರಾಜರಲ್ಲಿ-ದೇವತಾರಾಧನೆ, ಅತಿಥಿಸತ್ಕಾರ, ಶಿಕ್ಷಣಕ್ರಮ, ಪ್ರಜಾಪಾಲನ ಪರಿಪಾಟಿ ಎಂಬಿವು ಬಲು ಅಚ್ಚುಕಟ್ಟಿನಿಂದ ನೆಲೆಗೊಂಡು ಹೆಚ್ಚಳಗೊಳಿಸುತಲಿದ್ದುವು. ಆ ನರನಾಥರು ಗಳಿಸಿದ ಹಣವೆಲ್ಲ ಸತ್ಪಾತ್ರದಲ್ಲಿ ವಿನಿಯೋಗವಾಗುತಲಿದ್ದಿತಲ್ಲದೆ ದುರ್ಮಾರ್ಗದಲ್ಲಿ ವೆಚ್ಚವಾಗುತಲಿರಲಿಲ್ಲ. ಸತ್ಯಸಂರಕ್ಷಣೆಗಾಗಿ ಮಿತಭಾಷಣವು ಅವರಲ್ಲಿ ನಲೆಗೊಂಡಿದ್ದಿತಲ್ಲದೆ, ಹೆಮ್ಮೆಯಿಂದಾಗಲಿ, ಪರರನ್ನು ಅಸಡ್ಡೆ ಮಾಡಿಯಾಗಲೀ ಅಲ್ಲ. ಹಗೆಗಳನ್ನಡಗಿಸಲಿಕ್ಕೂ,

ಯಶೋವಂತರಾಗಲಿಕ್ಕೂ, ದಿಗ್ವಿಜಯಮಂಗೆಯ್ಯುತಲಿದ್ದರಲ್ಲದೆ ಹಣದಾಶೆಯಿಂದಲಾಗಲಿ, ತೋಳುಬಲದ ಪೊಗರಿನಿಂದಲಾಗಲೀ ಅಲ್ಲ. ಸಂತತಿಯು ತಂತುವು ಕತ್ತರಿಸಿ ಹೋಗಬಾರದೆಂಬ ಧರ್ಮವನ್ನು ಪರಿಪಾಲಿಸಲಿಕ್ಕೇ ಗೃಹಸ್ಥಾಶ್ರಮವನ್ನು ಪರಿಗ್ರಹಿಸುತ್ತಿದ್ದರಲ್ಲದೆ, ಕಾಮಭೋಗಗಳ ಕುತೂಹಲದಿಂದಲ್ಲ. ಮತ್ತು-ಬಾಲ್ಯದಲ್ಲಿಯೇ ವಿದ್ಯೆಗಳನ್ನೆಲ್ಲ ಕಲಿತು, ಪ್ರಾಯದೊಳಗೆ ಗೃಹಸ್ಥಾಶ್ರಮದಿಂದ ಸಂಸಾರಸುಖದಲ್ಲಿ ಆಸಕ್ತರಾಗಿ, ಮುಪ್ಪುಬರುತಲಿರುವಾಗ ವಾನಪ್ರಸ್ಥಾಶ್ರಮ ಸ್ವೀಕಾರದಿಂದ ಮುನಿಧರ್ಮಗಳನ್ನು ಆಶ್ರಯಿಸಿ, ಅವಸಾನ ಕಾಲದೊಳಗೆ ಸನ್ಯಾಸವನ್ನವಲಂಬಿಸಿ, ಪರಮಾತ್ಮಧ್ಯಾನದಿಂದ ಶರೀರವನ್ನು ಬಿಡುವ ಸಂಪ್ರದಾಯವು ಅವರ ಕುಲಕ್ರಮವಾಗಿ ಬರುತಲಿದ್ದುದರಿಂದ ನಾಲ್ಕಾಶ್ರಮಗಳ ಧರ್ಮಗಳೂ ಈ ವಂಶದ ಅರಸರಲ್ಲಿ ಆಯಾಯ ಕಾಲದೊಳಗೆ ತಪ್ಪದೆ ಆಚರಣೆಯಲ್ಲಿದ್ದುವು.

ಯದ್ಯಪಿ-ರಘುರಾಜರ ಚರಿತ್ರೆಯ ವಿಭವವನ್ನೆಲ್ಲ ವಿವರಿಸುವಷ್ಟು ವಾಗ್ವೈಭವದ ತಿರುಳು ನನಗೆ ಇಲ್ಲ. ಆದರೆ- ಆ ಅವನಿಪಾಲರ ಸುಗುಣರತ್ನಾವಳಿಯು ಬಗೆಬಗೆಯಿಂದ ನನ್ನ ಕರ್ಣಾಲಂಕಾರವಾಗಿ, ಅವರ ಅನ್ವಯ ಕ್ರಮವನ್ನು ವರ್ಣಿಸಲಿಕ್ಕೆ ನನ್ನನ್ನು ವಿಚಾರವಿಲ್ಲದೆ ಪ್ರೇರಿಸುತಲಿದೆ, ಇದರಿಂದ ಚಾಪಲಕ್ಕೊಳಗಾಗಿ, ದುಡುಕಿ ಹೇಳತೊಡಗಿದೆನು. ಚಿನ್ನವನ್ನು ಬೆಂಕಿಯಲ್ಲಿ ಪುಟವಿಡುವುದರಿಂದ ಹೊನ್ನಿನ ಬಣ್ಣವಾಗಲಿ, ಇತರ ಲೋಹದ ಬೆರಕೆಯಿಂದುಂಟಾದ ಕಲೆ (ಬಚ್ಚ) ಯೇ ಆಗಲೀ ತಿಳಿಯ ಬರುವ ಹಾಗೆ, ಈ ನನ್ನ ರಘುಕುಲಚರಿತವು-ಕಾವ್ಯಭಾವನಾಪರಿಪಕ್ವ ಬುದ್ಧಿಯುಳ್ಳ ಸತ್ಪುರುಷರ ಕಿವಿಯನ್ನು ಹೊಕ್ಕರೇ ಅವರ ಗುಣದೋಷಗಳವಿಭಾಗವು ವ್ಯಕ್ತವಾಗುವುದು, ಅದರಿಂದ ಮುಂದರಿವೆನು:—

ಇಂತು ಮಾಹಾತ್ಮ್ಯಂ.



# ಕಥಾರಂಭಂ.

ಶ್ರೀಃ.

ವೇದಗಳೊಳಗೆ ಓಂಕಾರವು ಹೇಗೋ ಹಾಗೆ, ವೈವಸ್ವತನೆಂಬ ಮನುವು-ವಿದ್ವಾಂಸರಿಗೆ ಮಾನ್ಯನೆನಿಸಿ, ಅರಸರಲ್ಲಿ ಮೊಟ್ಟಮೊದಲನೆಯವನಾಗಿ ನೆಲಸಿದನು. ಪವಿತ್ರತರವಾದ ಆತನ ವಂಶದಲ್ಲಿ-ಅತಿ ಪರಿಶುದ್ಧನಾದ ದಿಲೀಪನೆಂಬ ರಾಜರಾಜನು ಪರಿಪೂತವಾದ ಪಾಲ್ಗಡಲೊಳಗೆ ಪೂರ್ಣಚಂದ್ರನಂತೆ ಜನಿಸಿಬೆಳಗುತಲಿದ್ದನು. ಈತನಿಗೆ ಬಲು ಅಗಲವಾದ ಎದೆಯೂ, ಗೂಳಿಯಹಿಳಲಿನಂತೆ ಎತ್ತರವಾದಹೆಗಲೂ, ಮರದತಾಳಿನಂತೆ ನೀಳವಾದ ತೋಳೂಇದ್ದುದರಿಂದ ನೆಲದಾಳ್ವಿಕೆಯೆಂಬ ಕ್ಷತ್ರಧರ್ಮವು, ಅಥವಾ ಪರಾಕ್ರಮವು - ತನ್ನ ಕರ್ತವ್ಯವನ್ನು ನೆರವೇರಿಸಲೋಸುಗ ಈ ರೂಪವಾದ ಉಚಿತದೇಹವನ್ನಾಂತು ಬಂದಿರುವುದೋ ಎಂಬಂತೆ ಕಾಣಬರುತಲಿದ್ದನು. ಇದಲ್ಲದೆ—ಆ ದಿಲೀಪರಾಜನು ಎಲ್ಲ ವಸ್ತುಗಳಿಗಿಂತ ಮಿಗಿಲೆನಿಸಿದ ಬಲವನ್ನೊಳಗೊಂಡು, ಎಲ್ಲ ಪ್ರಾಣಿಗಳಿಗಿಂತಲೂ ಮೇಲೆನಿಸಿದ ತೇಜಸ್ಸನ್ನು ಹೊಂದಿ, ಎಲ್ಲರಿಗಿಂತ ಉನ್ನತನೂ ಆಗಿ, ಮೇರುವಿನಂತೆ ಭೂಮಿಯನ್ನೆಲ್ಲ ಆಕ್ರಮಿಸಿ ಎಂದರೆ-ತನ್ನ ಆಳ್ವಿಕೆಗೊಳಪಡಿಸಿಕೊಂಡು ಇದ್ದನು. ಅಷ್ಟದಿಕ್ಪಾಲಕರ ಅಂಶಗಳೂ ಒಟ್ಟಾಗಿ ಈತನಲ್ಲಿ ಕಲೆತಿದ್ದುವು. ತನ್ನ ಶ್ರೇಷ್ಠವಾದ ಆಕಾರಕ್ಕೆ ತಕ್ಕ ಪ್ರಜ್ಞೆಯನ್ನುಳ್ಳವನಾಗಿ, ಆ ಪ್ರಜ್ಞೆಗನುಗುಣವಾದ ಶಾಸ್ತ್ರ ಪರಿಚಯವನ್ನು ಪಡೆದು, ಆ ಶಾಸ್ತ್ರಾಭ್ಯಾಸಕ್ಕೆ ಅನುರೂಪವಾದ ಕಾರ್ಯವನ್ನು ಆರಂಭಿಸಿ, ಅದಕ್ಕೆ ಸರಿಯಾದ ಫಲಸಿದ್ಧಿಯನ್ನೂ ಹೊಂದುತಲಿದ್ದನು. ದುರುಳರನ್ನಡಗಿಸುವ ಶೌರ್ಯ, ಪ್ರತಾಪ, ರಾಜತೇಜಸ್ಸು ಮುಂತಾದ ಭಯಂಕರಗುಣಗಳೂ, ಶಿಷ್ಟರನ್ನು ಸಲಹುವ ಸತ್ಕುಲ ಜನ್ಮ, ಶೀಲ, ದಯೆ, ದಾಕ್ಷಿಣ್ಯ ಮೊದಲಾದ ಮನೋಹರ ಸುಗುಣಗಳೂ ಈತನಲ್ಲಿ ಒಡಗೂಡಿದ್ದುದರಿಂದ, ಈ ದೊರೆಯು-ಮೊಸಳೆ ಮುಂತಾದ ಕ್ರೂರಜಂತುಗಳಿಂದಲೂ, ಮುತ್ತು, ರತ್ನ ಮೊದಲಾದ ಸನ್ಮಣಿಗಳಿಂದಲೂ ಸಮುದ್ರವು ಹೇಗೋ ಹಾಗೆ, ದುರ್ವೃತ್ತಿಯಿಂದ ಹಗೆಗಳತಿಕ್ರಮಿಸಲಿಕ್ಕೆ ಅಸದಳನಾಗಿಯೂ, ಸದ್ವ್ಯಾಪಾರದಿಂದ ಸಾಧುಗಳು ಆಶ್ರಯಿಸಲು ಸುಲಭನಾಗಿಯೂ ಇರುತ್ತಿದ್ದನು.

ಜಾಣನಾದ ಸಾರಥಿಯು ನಡೆಯಿಸುವ ತೇರಿನ ಗಾಲಿಯು ಪಟ್ಟೆಯು ಜಾಡನ್ನು ಬಿಟ್ಟು ಅತ್ತಿತ್ತ ಒತ್ತಿ ಹೋಗದ ಹಾಗೆ, ಸುಶಿಕ್ಷಣದಿಂದ ಸರಿಯಾಗಿ ಪಳಗಿದ್ದ ದಿಲೀಪನ ಪ್ರಜೆಗಳು ಮನುವಿನ ಕಾಲದಿಂದ ಬಳಕೆಯಲ್ಲಿ ಒಂದಿರುವ ಸದಾಚಾರದ ಪದ್ಧತಿಯನ್ನು ಎಳ್ಳಷ್ಟಾದರೂ ದಾಟಿ ಹೋಗುತ್ತಿರಲಿಲ್ಲ. ಸೂರ್ಯನು ಬೇಸಗೆಯಲ್ಲಿ ನೆಲದಲ್ಲಿನ ನೀರನ್ನು ತನ್ನ ಕಿರಣಗಳಿಂದ ಹೀರಿ, ಒಂದಕ್ಕೆ ಸಾವಿರ ಪಾಲಿನಷ್ಟು ಹೆಚ್ಚಾಗಿ ಭೂಮಂಡಲಕ್ಕೆ ಮಳೆಗರೆಯುವ ಹಾಗೆ, ದಿಲೀಪ ಭೂಪನೂ ತನ್ನ ಆಳ್ವಿಕೆಯ ನೆಲದ ಹುಟ್ಟುವಳಿಯಲ್ಲಿ ಆರನೆಯ ಒಂದು ಪಾಲನ್ನು ಕಂದಾಯವನ್ನಾಗಿ ತೆಗೆದುಕೊಂಡರೂ, ಅದನ್ನೆಲ್ಲ ಪ್ರಜೆಗಳ ಮೇಲ್ಮೆಗಾಗಿಯೇ ವಿನಿಯೋಗಿಸುತಲಿದ್ದನು. ಕಂದಾಯದ ಹಣವು ಯಜ್ಞಯಾಗಾದಿ ಸತ್ಕಾರ್ಯಗಳಿಗೆ ಉಪಯೋಗಿಸುತಲಿದ್ದಿತು, ಅದರಿಂದ ಸಂತುಷ್ಟರಾದ ದೇವತೆಗಳು ಹೇರಳವಾಗಿ ಮಳೆಗರೆಯುತಲಿದ್ದರು, ಇದರಿಂದ ಬೆಳೆಯು ಹುಲುಸಾಗಿ, ಪ್ರಜೆಗಳಿಗೆ ತೃಪ್ತಿಯುಂಟಾಗುತಲಿದ್ದಿತು. ಆ ಅವನಿಪಾಲನು ಅಸಹಾಯಶೂರನಾಗಿದ್ದುದರಿಂದ, ಆತನಿಗೆ ಚತುರಂಗಬಲವು ಛತ್ರ ಚಾಮರಗಳಂತೆ ಅಲಂಕಾರವಾಗಿ ಮಾತ್ರವೇ ಇರುತ್ತಿತ್ತು, ತಡೆಯಿಲ್ಲದ ಶಾಸ್ತ್ರಜ್ಞಾನ, ಬಿಲ್ಲನೇರಿಸಿದ ಬಾಣ, ಇವೆರಡೇ ಎಲ್ಲ ಕೆಲಸಗಳನ್ನೂ ಕೈಗೂಡಿಸುತಲಿದ್ದುವು. ಲೋಕದಲ್ಲಿ ಯಾವನಾದರೊಬ್ಬ ಮನುಷ್ಯನಿಗೆ ಹಠಾತ್ತಾಗಿ ಹಣವು ದೊರೆತರೆ, ಆಗ ಅವನ ಪೂರ್ವಪುಣ್ಯವು ಉತ್ತಮವಾದುದೆಂತಲೂ, ಅದೇ ಮನುಷ್ಯನು ಅಕಸ್ಮಾತ್ತಾಗಿ ಅಕಾಲ ಮರಣವನ್ನೈದಿದರೆ, ಅವನ ಪೂರ್ವಸುಕೃತವು ಹೀನವಾದುದೆಂತಲೂ ಜನರು ಊಹಿಸಿ ತಿಳಿಯುವ ಹಾಗೆ, ಆ ಧರಾನಾಥನು-ಮೂರನೆಯವರರಿಯದಂತೆ ಗುಟ್ಟಾಗಿ ಯೋಚಿಸಿ ಮಾಡಿದ ಉದ್ಯೋಗವು, ಸಾಮಾದಿ ಉಪಾಯಗಳ ಪ್ರಯೋಗದಿಂದ ಕೆಲಸವು ಮುಗಿದ ಮೇಲೆಯೇ ಹೆರರಿಗೆ ಗೊತ್ತಾಗುತಲಿದ್ದಿತು, ಅದು ಹೊರತು ನಡುಗಾಲದಲ್ಲಿ ಹಿಗ್ಗುವುದು, ತಗ್ಗುವುದು ಮೊದಲಾದ ಮುಖವಿಕಾರದಿಂದಲಾಗಲೀ, ಮಾತುಗಳ ಹೋರೆಯಿಂದ ಹೊರಪಡುವ ಮನೋಭಾವದಿಂದಲಾಗಲಿ ವ್ಯಕ್ತಪಡುತ್ತಿರಲಿಲ್ಲ.

ಇಂತಹ ಸುಗುಣಮಣಿಗಳಿಗೆ ಗಣಿಯಾದ ಆ ಭೂರಮಣನ ಭಯವು ಬಂದಮೇಲೆ ಕಳವಳ ಪಡದಹಾಗೆ, ಮೊದಲೇ ರಾಜ್ಯಭಾರವನ್ನೆಲ್ಲ

ಅಣಿಮಾಡಿಟ್ಟು, ಭಯಪ್ರವೇಶಕ್ಕೆ ಸಂಚಿಲ್ಲದಂತೆಸಗಿ, ಧರ್ಮಾರ್ಥಕಾಮಗಳಿಗೆ ಮೂಲವಾದ ದೇಹವನ್ನು ಕಾಪಾಡಿಕೊಂಡನು. ರೋಗಾದ್ಯುಪದ್ರವಗಳ ಹಾವಳಿಗೆ ಅವಕಾಶವಿಲ್ಲದಂತೆ, ಮುಂಚೆಯೇ ದೇವತಾರಾಧನಾದಿಗಳಿಂದ ಧರ್ಮವನ್ನಾರ್ಜಿಸಿಟ್ಟಿದ್ದನು. ಹಣವನ್ನು ಗಳಿಸಬೇಕೆಂದು ತಹತಹ ಪಡದೆಯೇ ದ್ರವ್ಯವನ್ನು ಸಂಪಾದಿಸಿದನು. ಸುಖಪಡಬೇಕೆಂದು ಆಶೆಯಲ್ಲಿ ಮುಳುಗದೆಯೇ ಸುಖವನ್ನೂ ಅನುಭವಿಸಿದನು. ಹೆರರ ವೃತ್ತಾಂತವೇ ಮುಂತಾದ ಸಕಲ ವಿಷಯಗಳನ್ನೂ ಬಲ್ಲವನಾಗಿದ್ದರೂ ಮೌನದಿಂದಿರುತ್ತಿದ್ದನು, ಎಲ್ಲರನ್ನೂ ದಂಡಿಸುವ ಶಕ್ತಿಯಿದ್ದರೂ ಆತನಿಗೆ ಬಹು ತಾಳ್ಮೆಯಿದ್ದಿತು. ಕೊಡುಗೈಯವನಾದರೂ ಹೆಮ್ಮೆಯಿಂದ ತನ್ನನ್ನು ತಾನು ಹೊಗಳಿಕೊಳ್ಳದೆಯೂ, ಹೆರರ ಹೊಗಳಿಕೆಗೆ ಹಿಗ್ಗದೆಯೂ ಇರುತ್ತಿದ್ದನು. ಆದಕಾರಣ-ಜ್ಞಾನ, ದಂಡಶಕ್ತಿ, ದಾತೃತ್ವ, ಎಂಬೀಗುಣಗಳು-ಮೌನ, ಸೈರಣೆ, ಹೊಗಳಿಕೊಳ್ಳದಿರೋಣ ಎಂಬೀ ಗುಣಗಳೊಡನೆ ಪರಸ್ಪರ ವಿರುದ್ಧಗಳಾಗಿದ್ದರೂ, ವೈರವನ್ನು ತೊರೆದು, ಆತನಲ್ಲಿ ಒಡಹುಟ್ಟಿದವುಗಳಂತೆ ಗೆಳೆತನದಿಂದಿದ್ದುವು. ಧೀರನಾದ ಆ ಧರಿತ್ರೀನಾಥನು-ಹೂವು, ಹಣ್ಣು, ಹೆಣ್ಣು, ಹೊನ್ನು, ಹಾಡು, ಮೊದಲಾದ ವಿಷಯಗಳಿಗೆ ವಶನಾಗಿರಲಿಲ್ಲ, ಸಕಲ ವಿದ್ಯಾಪಾರಂಗತನೆನಿಸಿ, ಮಹಾಧರ್ಮಾತ್ಮನೂ ಆಗಿದ್ದನು.ಆದುದರಿಂದಲೇ ಆತನಿಗೆ ಜ್ಞಾನದಿಂದ ಮುಪ್ಪು ಬಂದಿದ್ದಿತಲ್ಲದೆ ವಯಸ್ಸಿನಿಂದ ಬಂದಿರಲಿಲ್ಲ. ಇಂತು-ಸತ್ಯ ಧರ್ಮ ಜ್ಞಾನಾದಿ ಗುಣಗಳಿಗೆ ನಿಧಿಯಾದ ಆ ಭೂವಲ್ಲಭನು ತನ್ನ ದೇಶದ ಪ್ರಜೆಗಳ ಮಕ್ಕಳಿಗೆ ವಿದ್ಯಾಬುದ್ಧಿಗಳನ್ನು ಕಲಿಸಿದ ವಿನಯನದಿಂದಲೂ, ಭಯವಿಲ್ಲದಂತೆ ಮಾಡಿದ ರಕ್ಷಣೆಯಿಂದಲೂ,ಧರ್ಮಸಂಬಂಧದತಂದೆಯಾಗಿರುತ್ತಿದ್ದನು. ಆಯಾಮಕ್ಕಳ ತಾಯಿತಂದೆಗಳು-ಆ ಹಸುಳೆಗಳಜನನಕ್ಕೆಮಾತ್ರವೇ ಕಾರಣರಾಗಿರುತ್ತಿದ್ದರು. ಲೋಕವ್ಯವಹಾರದ ಮರ್ಯಾದೆಯನ್ನು ಕಾಪಾಡಲೋಸುಗ ಅಪರಾಧಿಗಳಿಂದ ದಂಡದ ತೆರಿಗೆಯನ್ನು ತೆಗೆದುಕೊಳ್ಳುತ್ತ, ವಂಶಾಭಿವೃದ್ಧಿಯ ಧರ್ಮಾರ್ಥವಾಗಿ ವಿವಾಹವನ್ನು ಮಾಡಿಕೊಂಡು, ತನ್ನ ತಪ್ಪುಗಳನ್ನೆಲ್ಲತಿಳಿದು ತಿದ್ದಿಕೊಳ್ಳುವ ವಿದ್ವಾಂಸನಾಗಿದ್ದ ಆ ತಿಳಿಯಾಣ್ಮನಿಗೆ ಧನಕಾಮಲಾಭಗಳೆರಡೂ ಧರ್ಮಲಾಭವಾಗಿಯೇ ಪರಿಣಮಿಸಿದ್ದುವು.

ಇದಲ್ಲದೆ-ಆ ಅರಸು ಪ್ರಜೆಗಳಿಂದೆತ್ತಿದ ಕಂದಾಯ ಕವಳಿಗೆಗಳಿಂದ

ಯಜ್ಞ ಯಾಗಾದಿ ಹಬ್ಬಗಳನ್ನು ಮಾಡಿ ದೇವತೆಗಳನ್ನು ತಣಿಸುತ ಬಂದನು, ಅದರಿಂದ ತೃಪ್ತನಾದ ಇಂದ್ರನು ನೆಲವು ಹೆಚ್ಚಿಗೆ ಬೆಳೆಕೊಡುವಂತೆ ಮಳೆಗರೆಯಿಸುತ್ತಿದ್ದನು. ಹೀಗೆ ಆ ಸುರನರದೇವರುಗಳು-ಮುಯ್ಯಿಗೆ ಮುಯ್ಯಿಮಾಡುವುದರ ಮೂಲಕ, ದೇವಭೂಲೋಕಗಳನ್ನು ಪೋಷಿಸಿಕೊಳ್ಳುತಲಿದ್ದರು. ದಿಲೀಪಭೂಪನ ಬಳ್ಳಿಯ ಹೆಸರುವಾಸಿಯು-ಇತರ ಮಹೀಪಾಲರೊಳಗೊಬ್ಬರಿಗೂ ಉಂಟಾಗಿರಲೇ ಇಲ್ಲ. ಏಕೆಂದರೆ—ಪ್ರಜೆಗಳಿಗಾವುದೊಂದು ಕುಂದೂ ಇಲ್ಲದಂತೆ ಆಡಳಿತವನ್ನು ಅರಸು ಅಣಿಮಾಡಿಟ್ಟಿದ್ದನು. ಆ ನಾಡಿನ ಜನರೆಲ್ಲ ನೆಮ್ಮದಿಯಾಗಿದ್ದುದರಿಂದ ಕಳ್ಳತನವೆಂಬ ಶಬ್ದಕ್ಕೆ ಎಡೆಯಿಲ್ಲದೆ, ತನ್ನನ್ನು ತಾನೇ ಕಳವುಮಾಡಿಕೊಂಡು, ಅರ್ಥವಿಲ್ಲದ ಶಬ್ದವಾಗಿದ್ದಿತು (ಮೊಲದ ಕೊಂಬು ಎಂಬಂತೆ) ಆ ಪೊಡವಿಯೊಡೆಯನಲ್ಲಿ ಮತ್ತೊಂದು ವಿಶೇಷ ಗುಣವಿದ್ದಿತು, ಅದೇನೆಂದರೆ-ಯಾವನಾದರೊಬ್ಬನು ಸುಗುಣಿಯಾಗಿದ್ದರೆ, ಅಂಥವನು ಹಗೆಯೇ ಆಗಿದ್ದರೂ,ರೋಗಿಗೆ ಮದ್ದು ಹಿತವಾಗುವಂತೆ ಆತನಿಗೆ ಆಪ್ತನಾಗುತ್ತಿದ್ದನು. ಮತ್ತೊಬ್ಬನು ಪರಮಾಪ್ತನೇ ಆಗಿದ್ದರೂ, ದುಷ್ಟನಾಗಿದ್ದರೆ ಅಂಥವನು ಹಾವು ಕಡಿದಬೆರಳು ಹಗೆಯಾಗುವಂತೆ ಅನಿಷ್ಟನೇ ಆಗುವನು. ಇಂತಪ್ಪ ಗುಣರಾಶಿಯಾದ ಆ ಮಹೀಶನ ಗುಣಗಳೆಲ್ಲ ಪರಾರ್ಥಗಳಾಗಿದ್ದುವಲ್ಲದೆ ಸ್ವಾರ್ಥಪರಗಳಾಗಿರಲಿಲ್ಲ, ಅದುದರಿಂದಲೇ ಸೃಷ್ಟಿಕರ್ತನಾದ ಬ್ರಹ್ಮನು-ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳಿಂದ ಪರೋಪಕಾರಿಗಳಾಗಿರಲೆಂಬ ನೇಮದಿಂದ ನೆಲ, ನೀರು, ಗಾಳಿ, ಬೆಳಕು, ಬೈಲುಗಳೆಂಬ ಪಂಚಭೂತಗಳನ್ನೂ ಯಾವ ಮೂಲಕಾರಣದಿಂದ ನಿರ್ಮಿಸಿದನೋ, ಆ ಕಾರಣಸಾಮಗ್ರಿಯಿಂದಲೇ ಈ ಮಹಾರಾಜನನ್ನೂ ನಿಜವಾಗಿ ನಿರ್ಮಿಸಿ ಇರಬೇಕು ಎಂದು ತೋರುತ್ತಿತ್ತು. ಆ ರಾಜನ ಶಾಸನಕ್ಕೊಳಗಾದ ನೆಲಕ್ಕೆ, ನಾಲ್ಕು ಕಡಲುಗಳ ದಡವೇ ಸುತ್ತುಕೋಟೆಯು ಗೋಡೆಯಾಗಿಯೂ, ಚತುಸ್ಸಾಗರಗಳೂ ಮಂಡಲಾಕಾರವಾದ ಕಂದಕವಾಗಿಯೂ ಇದ್ದುವು. ಇದರಿಂದ ಅರಸು-ಇದಿರಾಳಿಲ್ಲದೆ ಭೂಮಂಡಲವನ್ನೆಲ್ಲ ಒಂದೇ ಪಟ್ಟಣವನ್ನು ಹೇಗೋಹಾಗೆ ಆಳುತಲಿದ್ದನು. ಮಗಧರಾಜಪುತ್ರಿಯಾಗ, ದಾಕ್ಷಿಣ್ಯಗುಣದ ಸಂಬಂಧದಿಂದ ಸುದಕ್ಷಿಣೆಯೆಂದು ಬಳಕೆಗೆ ಬಂದ ಹೆಸರನ್ನು ಪಡೆದಿದ್ದ ಸಾಧ್ವಿಯು-ಯಜ್ಞಕ್ಕೆ ಸಾದ್ಗುಣ್ಯವನ್ನಾಗಿಸುವ ದಕ್ಷಿಣೆಯು

ಹೇಗೋ ಹಾಗೆ, ಆ ಮಹಾರಾಜನಿಗೆ ಧರ್ಮಪತ್ನಿಯಾಗಿದ್ದಳು, ಆ ದಿಲೀಪ ರಾಜನಿಗೆ ಬಹುಮಂದಿ ಹೆಂಡತಿಯರಿದ್ದರು, ಆದರೂ ಆತನು-ತನ್ನ ಮನೋಗತವನ್ನನುಸರಿಸಿ ಬಾಳುವ ಸುದಕ್ಷಿಣೆಯಿಂದಲೂ, ರಾಜ್ಯಲಕ್ಷ್ಮಿಯಿಂದಲೂ ತನ್ನನ್ನು ಸಪತ್ನೀಕನನ್ನಾಗಿ ಭಾವಿಸಿ ಇದ್ದನು.

ಅಂತಾ ಮನದನ್ನೆಯೊಡನೆ ಸಂಸರಿಸುತಲಿರುವಲ್ಲಿ ಅರಸಿಗೆ ಸಂತಾನಲಾಭವಾಗಲಿಲ್ಲ, ಫಲವು ದೂರವಾಗಿದ್ದಿತು, ಕಳವಳವೇನೋ ಹೆಚ್ಚುತಲಿತ್ತು, ಈ ತಿಂಗಳಲ್ಲಿ, ಇಲ್ಲವೆ ಮುಂದಿನ ತಿಂಗಳಲ್ಲಿ ಅಥವಾ ಆಚೆಯ ತಿಂಗಳೊಳಗೆ ಫಲವು ನಿಲ್ಲಬಹುದೆಂದು ತಹತಹ ಪಡುತ ಕಾಲವನ್ನು ಕಳೆಯುತ ಬಂದನು. ಆದರೂ ಫಲಸೂಚನೆಯಾಗಲಿಲ್ಲ, ಉಪಾಯಾಂತರವನ್ನು ಹುಡುಕಬೇಕಾಯಿತು, ಆಗ ಅರಸು-ಮನದೇಳಿಕೆಯನ್ನಾಚರಿಸಲು ತನ್ನ ಹೆಗಲ ಮೇಲಿದ್ದ ನಾಡಿನ ಆಡಳಿತದ ಹೊರೆಯನ್ನು ನಂಬುಗೆ ಗೊಳಗಾದ ಮಂತ್ರಿಗಳಿಗೆ ಒಪ್ಪಿಸಿದನು. ಬಳಿಕ ಆ ರಾಜದಂಪತಿಗಳು-ಸ್ನಾನಾದಿಗಳಿಂದ ಪರಿಶುದ್ಧರಾಗಿ "ಬ್ರಹ್ಮನು ಸೃಷ್ಟಿಕಾಲದಲ್ಲಿ ತನ್ನ ಸೃಷ್ಟಿಯ ಸೌಕರ್ಯಕ್ಕಾಗಿ-ದಕ್ಷ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ವಿಶ್ವೇಶ ಮೊದಲಾದ ಹದಿನಾಲ್ಕುಮಂದಿ ಪ್ರಜೇಶ್ವರರನ್ನು ತನ್ನ ಮನಸ್ಸಿನಿಂದ ಕಲ್ಪಿಸಿದನು, ಅವರಿಂದ ಲೋಕವೆಲ್ಲ ಹರಡಿತು" ಎಂದು ಸಂತತಿಗೆ ಮೂಲಕಾರಣವಾದ ವಿಶ್ವೇಶನೆಂಬ ಬ್ರಹ್ಮನನ್ನು ಭಕ್ತಿಯಿಂದ ಪೂಜಿಸಿ, ಸಂತಾನಾಭಿಲಾಷೆಯಿಂದ ತಮ್ಮ ಮನೆತನಕ್ಕೆ ಗುರುವಾದ ವಸಿಷ್ಠಮುನಿಯನ್ನು ದರ್ಶನ ಮಾಡಬೇಕೆಂದು ಆತನ ತಪೋವನವನ್ನು ಕುರಿತು ಹೊರಟರು. ಅಷ್ಟು ಹೊತ್ತಿಗೆ ಕಿವಿಗಿಂಪಾಗಿ ದನಿಗೈವ ರಥವು ಬಂದು ಸಿದ್ಧವಾಯಿತು. ಸತಿಪತಿಗಳಿಬ್ಬರೂ ಏರಿದರು, ಆಗ ಕಾರ್ಮುಗಿಲನ್ನು ಏರಿದ ಮಿಂಚು ಮತ್ತು ನೀರುತುಂಬಿದ ಮೋಡ ಅಥವಾ ಐರಾವತವೆಂಬ ಇಂದ್ರನ ಆನೆ ಇವುಗಳಂತೆ ಕಂಗೊಳಿಸುತ್ತಿದ್ದರು. ತಪೋವನವಾಸಿಗಳಿಗೆ ತೊಂದರೆ ಯಾಗಬಾರದು, ವಿನೀತವೇಷದಿಂದ ಪ್ರವೇಶಿಸಬೇಕು ಎಂದು ಮಿತವಾದ ಪರಿವಾರದಿಂದೊಡಗೂಡಿದ್ದರೂ, ಬೆಳಗುತಲಿರುವ ರಾಜತೇಜಸ್ಸಿನ ಮಹಿಮೆಯಿಂದ ಬಹುಸೇನೆಯೊಡಗೂಡಿರುವವರ ಹಾಗೆ ಕಾಣಬರುತಲಿದ್ದರು.

ಆಗ-ಹಾಲುಮದ್ದಿಯ ಗಿಡಗಳೊಳಗೆ ಸುಗ್ಗಿ, ಹೂಗೆಳೆಗಳ

ರಜಗಳನ್ನು ಕೆದರಿ, ಕಾಡು ಮರಗಳ ಮೇಲೆ ಹರಿದು, ಶುಭವನ್ನು ಸೂಚಿಸುತ್ತ, ಹಾಯಾಗಿರುವ ಗಾಳಿಯು ಬೀಸುತಲಿದ್ದಿತು. ಇಂತು ಸುಖಪ್ರಯಾಣವನ್ನು ಬೆಳಸುತಲಿರುವಲ್ಲಿ ಆ ತೇರಿನ ಗಾಲಿಯ ಸದ್ದನ್ನು ಕೇಳಿದ ಕೂಡಲೇ, ಮಳೆಗಾಲದ ಮೋಡವು ಗುಡುಗುತ್ತಿದೆಯೆಂಬ ಭ್ರಾಂತಿಗೊಂಡು, ಇದಿರಾಗಿ ತಮ್ಮ ಕೊರಳನ್ನೆತ್ತಿ, ಷಡ್ಜಸ್ವರವನ್ನು ಹೇಳುತ್ತಿರತಕ್ಕ ಶುದ್ಧ, ವಿಕೃತ ಎಂಬೆರಡು ಬಗೆಯಿಂದ, ಇಂಪಾಗಿ ದನಿಗೈವ ಹೆಣ್ಣುಗಂಡು ನವಿಲುಗಳ ಕೇಕಾರವಗಳನ್ನು ಕೇಳಿದರು. ಹಾಗೆಯೇ ಮುಂದೆ ಹೊರಟರು, ಸ್ವಲ್ಪ ಹೊತ್ತಿನಲ್ಲಿಯೇ ಹಳುವವನ್ನು ಹೊಕ್ಕರು, ಆಗ-ಇಕ್ಕೆಲವಲ್ಲಿ ಹುಲ್ಲನ್ನು ಮೇಯುತಲಿದ್ದ ಹುಲ್ಲೆಗಳು-ಎಂದೂ ಭಯಗೊಂಡವುಗಳಲ್ಲ, ಅಂತಹ ಬಂಡಿಗಳನ್ನು ನೋಡಿದವುಗಳೂ ಅಲ್ಲ. ಆದರಿಂದ ಹತ್ತಿರದಲ್ಲಿಯೇ ನಿಂತು ರಥದಲ್ಲಿ ನಟ್ಟದಿಟ್ಟಿಯುಳ್ಳುವಾಗಿ ದುರುದುರನೆ ನೋಡುತಲಿದ್ದುವು. ಸುದಕ್ಷಿಣೆಯು ಗಂಡುಜಿಂಕೆಗಳಲ್ಲಿ ತನ್ನ ಮನದನ್ನನ ಕಣ್ಣಹೋಲಿಕೆಯನ್ನೂ, ದಿಲೀಪನು ಹೆಣ್ಣುಹುಲ್ಲೆಗಳೊಳಗೆ ತನ್ನ ಸತಿಯನಯನಗಳ ಸಾಮ್ಯವನ್ನೂ ನೋಡಿಕೊಳ್ಳುತ ಮುಂದರಿವಲ್ಲಿ, ಮಾರ್ಗದ ಮೇಲ್ಭಾಗದೊಳಗೆ, ಆಕಾಶದ ಬೈಲಿನಲ್ಲಿ ಸಾರಸಪಕ್ಷಿಗಳ ಹಿಂಡು ಸಾಲುಗಟ್ಟಿ ಹೋಗುತ್ತಿದ್ದರೆ, ರಾಜದಂಪತಿಗಳ ಪ್ರಯಾಣ ಸಮಯದಲ್ಲಿ ವಿಚಿತ್ರವಾಗಿರುವಂತೆ ಎಡಬಲ ಭಾಗಗಳ ಕಂಬಗಳಿಲ್ಲದೆ ಕಟ್ಟಿರುವ ತೋರಣ ಮಾಲೆಯು ಹಾಗೆ ಕ್ಷಣಕಾಲಮಾತ್ರ ಕಂಡು ಬರುವುದನ್ನು ತಲೆಯೆತ್ತಿ ನೋಡುತ್ತ ತೆರಳಿದರು. ಮಂದಮಾರುತವು ಅವರು ಪಯಣಮಾಡುವ ಕಡೆಗೇ ಹಿತವಾಗಿ ಬೀಸುತ್ತ, ನಿಮ್ಮ ಕೋರಿಕೆಯು ಕೈಗೂಡುವುದೆಂದು ಸೂಚಿಸುತಲಿದ್ದಿತು, ಕುದುರೆಗಳ ಕಾಲ ತುಳಿತದಿಂದ ಮೇಲಕ್ಕೆದ್ದ ಧೂಳಿಯು ಸುದಕ್ಷಿಣೆಯ ಮುಂಗೂದಲನ್ನೂ, ದಿಲೀಪನ ತಲೆಯುಪಾಗನ್ನೂ ಮುಟ್ಟುತಲಿರಲಿಲ್ಲ, ಸುದಕ್ಷಿಣಾದಿಲೀಪರು-ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿ ಇರುವಂತೆ ಉತ್ತಮಜಾತಿಯ ಸ್ತ್ರೀಪುರುಷರು. ಮಾರ್ಗದಲ್ಲಿ ಅತ್ತಿತ್ತ ಹತ್ತಿರದಲ್ಲಿ ಕಾಣಬರುವ ತಂಪಾದ ಕೊಳಗಳೊಳಗೆ ಕಂಗೊಳಿಸುವ ಕಮಲಗಳ ಮೇಲಣ ತಂಗಾಳಿಯು ಬೀಸುತಲಿದ್ದಿತು, ಆಗಲಾ ಗಂಡಹೆಂಡಿರು ಆ ವಾಯುವಿನಲ್ಲಿ ತಮ್ಮ ಉಸಿರಿನ ಸುವಾಸನೆಯನ್ನು ಹೋಲುತ್ತಿರುವ

ಗಮಲನ್ನು ಗಮನಿಸುತ ನಡೆವಾಗ ತಾವೂ ಮತ್ತು ತಮ್ಮ ಪೂರ್ವಿಕರೂ,
ಬ್ರಾಹ್ಮಣರಿಗೆ ದಾನಮಾಡಿದ ಅಗ್ರಹಾರಗಳು ಯೂಪಸ್ತಂಭಗಳೊಡನೆ
ಎತ್ತೆತ್ತಲೂ ಕಾಣಬರುತ್ತಿದ್ದುವು, ಅವುಗಳಲ್ಲಿ ವಾಸಮಾಡುವ ಶ್ರೋತ್ರಿ
ಯರು ಬಂದು, ಇದಿರ್ಗೊಂಡು ಆಚರಿಸಿದ ಸತ್ಕಾರಗಳನ್ನೂ, ಬಳಿಕ ವೇದ
ಘೋಷದಿಂದ ಹರಸಿದ ಸಫಲಗಳಾಗುವ ಹರಕೆಗಳನ್ನೂ, ಬಾಗಿದ ಶಿರಸ್ಸಿ
ನಿಂದ ಸ್ವೀಕರಿಸುತ ಬಂದರು, ಮತ್ತೆ ಸ್ವಲ್ಪ ಹೊತ್ತಿಗೆ “ನಮ್ಮನ್ನಾಳುವ
ದೊರೆಯು-ಪಟ್ಟದರಸಿಯೊಡನೆ ಪಯಣಮಾಡುತ್ತಿರುವನು, ಆ ನಮ್ಮೊಡೆ
ಯನನ್ನು ಕಾಣಬೇಕು” ಎಂದು ಮುನ್ನಿನಿರುಳಿನಲ್ಲಿ ಹೆಪ್ಪಿಟ್ಟದ್ದು ಆಗ
ತಾನೆ ಕಡೆದು ತೆಗೆದ ಬೆಣ್ಣೆಯನ್ನು ಕಾಯಿಸಿದ ತುಪ್ಪವನ್ನು ಅಕ್ಕರೆಯಿಂದ
ತೆಗೆದುಕೊಂಡು, ತವಕದಿಂದ ಬಂದು ಇದಿರ್ಗೊಂಡ ಹಳ್ಳಿಯ ಮುದುಗಾ
ಡರನ್ನು ಮಮತೆಯಿಂದ ಕಂಡು, ನಗುನಗುತ ಅವರ ಯೋಗಕ್ಷೇಮವ
ನ್ನು ವಿಚಾರಿಸಿ, ಕಾಡುಹಾದಿಯಲ್ಲಿ ಬೆಳದಿರುವ ಗಿಡಗಳನ್ನು ಅವರಿಗೆ ತೋ
ರಿಸಿ, ಈ ಗಿಡದ ಹೆಸರೇನು? ಈ ಬಳ್ಳಿಯ ಹೆಸರೇನು? ಎಂದು ಕೇಳು
ತ್ತಾ ಬರುತ್ತಿದ್ದರು. ಅಂದವಾದ ಅಲಂಕಾರದಿಂದ ಪಯಣಮಾಡುತಲಿ
ರುವ ಸುದಕ್ಷಿಣಾ ದಿಲೀಪರಿಗೆ, ಶಿಶಿರಋತುವು ಕಳೆದ ಬಳಿಕ ಚೈತ್ರಮಾ
ಸದ ಹುಣ್ಣಿಮೆಯಲ್ಲಿ ಚಿತ್ರಾನಕ್ಷತ್ರ ಮತ್ತು ಪೂರ್ಣಚಂದ್ರರಿಗೆ ಹೇ
ಗೋ ಹಾಗೆ, ಹೊಳಪು ಬೆಳಗುತಲಿದ್ದಿತು. ಸುಂದರನಾದ ದಿಲೀಪನು-
ಅಲ್ಲಲ್ಲಿ ಕಾಣಬರುವ ವಿಶೇಷ ಸಂಗತಿಗಳನ್ನೆಲ್ಲ ತನ್ನ ಪ್ರಿಯಪತ್ನಿಗೆ ತಿಳಿ
ಸುತ್ತಾ ತೆರಳುತ್ತಿರುವಾಗ, ಬಹು ಶಾಂತನೂ ಸುಂದರನೂ ಆದ ದಿಲೀಪ
ನು-ಅದುವರೆಗೆ ದಾಟಿಬಂದ ಬಹುದೂರವಾದ ದಾರಿಯ ದೂರವನ್ನೇ ಇ
ಷ್ಟೆಂದು ತಿಳಿಯಲಾರದಿದ್ದನು. ಹೆರರಿಗೆ ಅಸದಳವೆನಿಸಿದ ಯಶಸ್ಸನ್ನು
ಪಡೆದಿರುವ ರಾಜನು-ರಾಣಿಯೊಡನೆ ರಥಪ್ರಯಾಣದಿಂದ ಅನೇಕ ಅರ
ಣ್ಯಗಳನ್ನು ದಾಟಿ, ಸಂಜೆಯ ಹೊತ್ತಿಗೆ, ನಿಯಮಪರನಾದ ಮುನಿಯ
ತಪೋವನದ ಬಳಿಗೆ ಬಂದನು, ಅದುವರೆಗೆ ತೇರಿನ ಕುದುರೆಗಳೂ ದಾರಿ
ಯನ್ನು ನಡೆದು ಬಳಲಿದ್ದುವು.

ಆಗ ಆ ಆಶ್ರಮ ಪದವು ಹೇಗೆ ಇತ್ತೆಂದರೆ:—ಅಲ್ಲಲ್ಲಿ ವಾಸಮಾ
ಡುವ ತಪಸ್ವಿಗಳು ಪ್ರಾತಃಕಾಲದ ಅನುಷ್ಠಾನಗಳನ್ನು ತೀರಿಸಿಕೊಂಡು,
ದೂರದಲ್ಲಿನ ಅರಣ್ಯಗಳಿಗೆ ಹೋಗಿ, ಸಮಿತ್ತು, ದರ್ಭೆ, ಹಣ್ಣು ಮುಂತಾ

ದವುಗಳನ್ನು ತೆಗೆದುಕೊಂಡು, ಅಲ್ಲಿಂದ ಹಿಂದಿರುಗಿ, ಸಂಜೆಯ ಹೊತ್ತಿ ನಲ್ಲಿ ತಮ್ಮ ತಪೋವನದೆಡೆಗೆ ಬಂದು ಸೇರುವಾಗ್ಗೆ, ತಂತಮ್ಮ ಎಲೆಮನೆ ಗಳೊಳಗೆ ಬೆಳಗುತ್ತಿರುವ ಅಗ್ನಿಗಳು ಅದೃಶ್ಯಗಳಾಗಿ ಅವರನ್ನು ಇದಿ ರ್ಗೊಳ್ಳುತಲಿದ್ದುವು, ಚಿಕ್ಕಮಕ್ಕಳು-ತಮ್ಮ ಹಡದ ತಾಯಿಯರನ್ನು ಕಂ ಡು ತಿಂಡಿಯನ್ನು ಬೇಡುತ ಸುತ್ತಿಕೊಳ್ಳುವಂತೆ, ಹುಲ್ಲೆಗಳು ಬಾಗಿಲ ಮುಂದೆ ಹರಡಿರುವ ಹುಲ್ಲುಕಾಳುಗಳಲ್ಲಿ ತಮ್ಮ ಪಾಲನ್ನು ಬೇಡುವಂತೆ ಎಲೆ ಮನೆಗಳ ಬಳಿಯಲ್ಲಿ ಮುನಿಪತ್ನಿಯರನ್ನು ಮುತ್ತಿಕೊಂಡಿದ್ದುವು. ಆ ಪುಣ್ಯಾಶ್ರಮದ ಗಿಡಗಳ ಬುಡಗಳಲ್ಲಿನ ಪಾತೆಗಳೊಳಗೆ ನಿಲ್ಲುವ ನೀರ ನ್ನು ಹಕ್ಕಿಗಳು ಹೆದರದೆ ಕುಳಿತು ಕುಡಿವುದು ವಾಡಿಕೆಯಾಗಿದ್ದುದರಿಂದ ಋಷಿಕನ್ಯೆಯರು-ಆ ಪಕ್ಷಿಗಳ ನಂಬುಗೆಗಾಗಿ ಹೂವಿನಗಿಡಗಳಿಗೆ ನೀರೆ ರೆದ ಕೂಡಲೆ ದೂರವಾಗಿ ಸರಿಯುತಲಿದ್ದರು, ಪರ್ಣಶಾಲೆಗಳ ಮುಂದೆ ಅಂಗಳಗಳೊಳಗೆ ಒಣಗ ಹಾಕಿದ್ದ ಕಾಳುಕಡಿಗಳನ್ನು ಬಿಸಿಲು ತಂ ಪುತ ಬರಲು ಗುಡ್ಡೆಮಾಡುತಲಿದ್ದರು. ಕಾಡಿನಲ್ಲಿ ಮೇಯಲಿಕ್ಕೆ ಹೋಗಿ ದ್ದು ಹಿಂದಿರುಗಿ ಬಂದ ಮೃಗಗಳು ಆ ಬೈಲುಗಳಲ್ಲಿ ನಿರ್ಭಯವಾಗಿ ಮ ಲಗಿ, ಮಲಕು ಹಾಕತೊಡಗಿದ್ದುವು, ಇಂತಹ ಪುಣ್ಯವನದ ಬಾಗಿಲಿನ ಬಳಿಗೆ ಬರುವಾಗ್ಗೆ, ಮುನಿಗಳು-ಅಲ್ಲಲ್ಲಿ ಸಾಯಂಕಾಲದ ಹೋಮಗಳ ನ್ನು ಮಾಡುತಲಿದ್ದರು, ಮಂತ್ರಪೂರ್ವಕವಾಗಿ ಕೊಟ್ಟ ತುಪ್ಪವೇ ಮೊದ ಲಾದ ಆಹುತಿಗಳನ್ನು ಕೈಗೊಂಡ ಅಗ್ನಿಗಳು ಪ್ರಜ್ವಲಿಸುತಲಿರುವುದನ್ನು ಸೂಚಿಸುತ, ಅವುಗಳಿಂದ ಹೊರಟ ಹೊಗೆಗಳು ಗಾಳಿಯ ಮೂಲಕ ಆಶ್ರ ಮದ ಹೊರಗೆ ಬಂದು, ತಪೋವನಕ್ಕೆ ಅತಿಥಿಗಳಾಗಿ ಬರುವ ಪಾಂಥರಿಗೆ ತಮ್ಮ ಸುವಾಸನೆಯಿಂದ ಇಂಪುಕೊಡುತಾ, ಅವರನ್ನು ಪವಿತ್ರರನ್ನಾ ಗಿಯೂ ಮಾಡುತಲಿದ್ದುವು, ಆ ಬಳಿಕ-ದಿಲೀಪ ಮಹಾರಾಜನು- ರಥವ ನ್ನು ನಿಲ್ಲಿಸಿ ಬಳಲಿದ ಕುದುರೆಗಳನ್ನು ಸುದಾರಿಸಿಕೊಳ್ಳುವಂತೆ ಮಾಡೆಂದು ಸಾರಥಿಗೆ ಆಜ್ಞಾಪಿಸಿ, ಮೊದಲು ತನ್ನ ಹೆಂಡತಿಯನ್ನು ಕೆಳಗೆ ಇಳಿಸಿ,ತಾ ನೂ ತೇರಿನಿಂದಿಳಿದನು. ಅಲ್ಲಿಂದ ವನವನ್ನು ಒಳಹೊಕ್ಕು ಬರುತಲಿರು ವಾಗ-ಸಕಲ ರಾಜನೀತಿ ಕುಶಲನಾಗಿ, ತಮಗೆ ಸಂರಕ್ಷಕನೆನಿಸಿದ ಭೂಪಾ ಲನು ಭಾರ್ಯೆಯೊಡನೆ ಬರುತಲಿರುವುದನ್ನು ಕಂಡು, ಜಿತೇಂದ್ರಿಯರೂ, ಸ ದಾಚಾರ ಸಂಪನ್ನರೂ ಆಗಿರುವ ತಪಸ್ವಿಗಳು-ಬಹುಮಾನ್ಯನಾದ ಆತನಿಗೆ

ಕ್ರಮವಾಗಿ ಉಚಿತ ಸತ್ಕಾರಗಳನ್ನಿತ್ತರು. ಆಗಲಾ ಅರಸು-- ಅವ ರಾಚರಿಸಿದ ಪೂಜೆಪುರಸ್ಕಾರಗಳನ್ನು ವಿನಯಪೂರ್ವಕವಾಗಿ ಪರಿಗ್ರಹಿಸಿ ಮುಂದರಿದು, ಸಾಯಂಕಾಲದ ಹೋಮಾನುಷ್ಠಾನವನ್ನು ಮುಗಿಸಿ, ಸ್ವಾಹಾದೇವಿಯಿಂದೊಡಗೂಡಿದ ಯಜ್ಞೇಶ್ವರನಂತೆ ಅರುಂಧತಿಯು ಸೇವೆಯನ್ನು ಕೈಗೊಳ್ಳುತ ಕುಳಿತಿರುವ ತಪೋನಿಧಿಯಾದ ವಶಿಷ್ಠಮುನಿಯ ಸಂದರ್ಶನವನ್ನು ಮಾಡಿಕೊಂಡನು. ಬಳಿಕ-ತನ್ನ ಹೆಂಡತಿಯೂ ತಾನೂ ಭಯಭಕ್ತಿಗಳೊಡನೆ, ಬೇಗನೆ ಹತ್ತಿರಕ್ಕೆ ಬಂದು,ಮುನಿದಂಪತಿಗಳ ಅಡಿದಾವರೆಗಳಂ ಪಿಡಿಯಲು, ಅರುಂಧತೀವಶಿಷ್ಠರು-ಅರಸಿತಿಗೂ ಅರಸನಿಗೂ ಪ್ರೀತಿಪೂರ್ವಕವಾಗಿ ಹರಸಿದರು. ಆಮೇಲೆ- ಮಹಾಮುನಿಯು ಮಹಾರಾಜನಿಗೆ ಮನ್ನಣೆಯಂಗೈದು, ಆತನಿಗೆ ಮಾರ್ಗಾಯಾಸವು ಕಳೆದ ಬಳಿಕ ರಾಜ್ಯವೆಂಬ ಆಶ್ರಮದಲ್ಲಿ ಮುನಿಯಂತಿರುವ ಆತನನ್ನು ಕುರಿತು, ರಾಜ್ಯಾಂಗಗಳ ವಿಷಯವಾಗಿ ಕುಶಲಪ್ರಶ್ನೆ ಮಾಡಿದನು:—

ಹಗೆಗಳನ್ನು ಅಡಗಿಸಿದವನೂ, ವಾಚಾಲಕರೊಳಗೆ ಮೊದಲನೆಯವನೂ ಆಗಿರುವ ಅರಸು-ವೇದನಿಧಿಯಾದ ವಶಿಷ್ಠಮುನಿಯ ಪ್ರಶ್ನಾನಂತರದಲ್ಲಿ ಅರ್ಥಗರ್ಭಿತಗಳಾದ ಮಾತುಗಳನ್ನಾಡ ತೊಡಗಿದನು:—

ಎಲೈ ಕುಲಗುರುವೇ! ನನಗೆ ಒದಗ ಬಹುದಾಗಿರುವ ದೈವಿಕಗಳೂ, ಮಾನುಷಗಳೂ ಆದ ಆಪತ್ತುಗಳ ಸುಳಿವಿಲ್ಲದಂತೆ ಮಾಡಲು ನೀನು ಬದ್ಧಕಂಕಣನಾಗಿರುವಲ್ಲಿ, ಎನ್ನಯ ರಾಜ್ಯಾಂಗಗಳಲ್ಲಿ ಕುಶಲವು ನೆಲೆಗೊಳ್ಳದಿರಲು ಕಾರಣವೇನು ? ಸಕಲವೂ ಸಂಪನ್ನವಾಗಿಯೇ ಇದೆ. ಮಂತ್ರಕರ್ತನೂ ಪ್ರಯೋಕ್ತನೂ ಆಗಿರುವ ನಿನ್ನ ಮಂತ್ರ ಪ್ರಯೋಗದಿಂದಲೇ ಹಗೆಗಳೆಲ್ಲ ಅಡಗಿ. ಅವರ ಸುಳಿವೇ ಇಲ್ಲದಂತಾಗಿರುವಲ್ಲಿ, ಇದಿರಿಗೆ ಕಂಡುದನ್ನು ಮಾತ್ರವೇ ಗುರಿಹಿಡಿದು ಹೊಡೆವ ನನ್ನ ಶರಗಳಿಗೆ ಕೆಲಸವೇ ಇಲ್ಲದಂತಾಗಿದೆ, ಆದುದರಿಂದಲೇ ಮಾನುಷವಾದ ಆಪದಕ್ಕೆ ಎಡೆಯಿಲ್ಲ. ಕರ್ಮಠನಾದ ನೀನು-ವಿಧಿಯನ್ನನುಸರಿಸಿ ಅಗ್ನಿಗಳಲ್ಲಿ ಕೊಡುವ ಆಹುತಿಯೇ-ಮಳೆಯಿಲ್ಲದೆ ಬಾಡುವ ಪೈರುಗಳಿಗೆ ನೆಚ್ಚೆಯನ್ನನುಸರಿಸಿದ ಮಳೆಯಾಗಿ ಪರಿಣಮಿಸಿ, ಬೆಳೆಯು ಹುಲುಸಾಗಲು ಕಾರಣವಾಗುತ್ತಿರುವಲ್ಲಿ, ದೈವಿಕವಾದ ಕೇಡಿಗೆಡೆಯೆಲ್ಲಿ? ಎಲೈ ಮಹಾಮುನಿಯೇ! ನನ್ನ ದೇಶದ ಪ್ರಜೆಗಳೆಲ್ಲ ಈತಿ ಬಾಧೆಗಳ ಸುದ್ದಿಯನ್ನೇ ಅರಿಯದೆ

ನೂರುವರ್ಷಗಳ ಕಾಲವೂ ಬದುಕುತ್ತ, ಸುಖದಿಂದಿರುವುದಕ್ಕೆ ನಿನ್ನ ತಪೋ ಮಹಿಮೆಯೇ ನಿಮಿತ್ತವು. ಬ್ರಹ್ಮನ ಮಾನಸಪುತ್ರನೂ ಆಚಾರ್ಯನೂ ಆಗಿರುವ ನೀನು-ಹೀಗೆ ನನ್ನ ಯೋಗಕ್ಷೇಮಗಳನ್ನು ಯಾವಾಗಲೂ ವಿಚಾರಿಸಿಕೊಳ್ಳುತಲಿರುವಲ್ಲಿ, ನನ್ನ ಸಂಪತ್ತುಗಳಿಗೆ ಯಾವುದೊಂದು ಕುಂದೂ ಇಲ್ಲದಂತಾಗಿದೆ.

ಆದರೆ—ಸಕಲೈಶ್ವರ್ಯವೂ ಇಷ್ಟು ಅಣಿಯಾಗಿರುವಲ್ಲಿ, ನೀನೀಗ ಇಲ್ಲಿಗೆ ಬರಲು ಕಾರಣವೇನು ಎಂಬೆಯೊ ? ಬಿನ್ನವಿಸುವೆನು ಲಾಲಿಸು-ಎಲೈಗುರುವೇ! ನಿನ್ನ ಸೊಸೆಯಾದ ಈ ಸುದಕ್ಷಿಣೆಯಲ್ಲಿ ಸಂತಾನದ ಮುಖವನ್ನು ಕಾಣದಿರುವುದರಿಂದ ಸಪ್ತದ್ವೀಪಗಳಿಂದೊಡಗೂಡಿದ ವಸುಮತಿಯು-ರತ್ನಗಳನ್ನೇ ಬೆಳದುಕೊಡುತಲಿದ್ದರೂ ನನಗೆ ಸುಖಕರವಾಗಿಲ್ಲವು, ಪಿತಕೆಂದರೆ-ನನ್ನ ಅನಂತರದಲ್ಲಿ ಪಿಂಡದಾನವು ದೊರೆಯುವುದಿಲ್ಲವೆಂಬ ಶಂಕೆಯಿಂದ ಪಿತೃದೇವತೆಗಳು-ಶ್ರಾದ್ಧಗಳಲ್ಲಿ ನಾನು ಕೊಡುವ ಪಿಂಡಗಳನ್ನು ಹೊಟ್ಟೆತುಂಬ ತಿನ್ನದೆ,ಸ್ವಲ್ಪಸ್ವಲ್ಪವಾಗಿ ಉಳಿಸಿಟ್ಟುಕೊಳ್ಳುತ್ತಿರುವರಲ್ಲಾ ಎಂದು ದುಃಖಿಸುತ್ತೇನೆ. ಮತ್ತು-ನನ್ನ ತರುವಾಯ ತಮಗೆ ತರ್ಪಣೋದಕ ಪಾನವು ದುರ್ಲಭವೆಂದು ತಿಳದು,ಹಬ್ಬಹರಿದಿನಗಳಲ್ಲಿ ನಾನುಕೊಡುವ ತರ್ಪಣ ಜಲವು ಸಂಕಟದ ನಿಟ್ಟುಸಿರಿನಿಂದ ತುಸ ಬಿಸಿಯಾಗಲು, ಅದನ್ನೇ ಕುಡಿಯುತಲಿರುವರೆಂದು ವ್ಯಥೆಪಡುತಲಿದೇನೆ. ಇದಲ್ಲದೆ-ಯಜ್ಞ ಯಾಗಾದಿಗಳನ್ನಾಚರಿಸಿ, ದೇವಋಣದಿಂದ ಬಿಡುಗಡೆಯನ್ನು ಹೊಂದಿ,ಶುದ್ಧ ಚಿತ್ತನಾಗಿದೇನೆ, ಸಂತತಿಯ ಮುಖವನ್ನು ಕಾಣದೆ ಪಿತೃಋಣದಿಂದ ಮುಕ್ತನಾಗದೆಯಿರುವ ಕೊರತೆಯಿಂದ ಮಲಿನಾತ್ಮನಾಗಿರುವೆನು. ಈ ಕಾರಣದಿಂದಲೇ ಒಂದೆಡೆ ಬೆಳಗುತಲೂ, ಮತ್ತೊಂದೆಡೆ ಬೆಳಗದೆಯೂ ಇರುವ ಲೋಕಾಲೋಕ ಪರ್ವತದಂತಿರುವೆನು, ಎಲೈ ಸರ್ವಜ್ಞನಾದ ಆಚಾರ್ಯನೇ! ತಪಸ್ಸು, ದಾನ, ಮುಂತಾದ ಸತ್ಕರ್ಮಗಳಿಂದೊಗೆವ ಸುಕೃತವು-ಪರಲೋಕದಲ್ಲಿ ಸುಖವನ್ನು ಕಲ್ಪಿಸುವುದು. ಸತ್ಕುಲದೊಳುದಿಸಿದ ಸಂತಾನವು ಇಹಪರಸುಖಗಳೆರಡನ್ನೂ ಅನುಗೊಳಿಸುವುದಲ್ಲವೆ ? ಎಲೈ ಹಿತಚಿಂತಕನಾದ ಗುರುವೇ ! ಈ ನಿನ್ನ ತಪೋವನದಲ್ಲಿ ನೀನೇ ಒಂದು ಬಿತ್ತವನ್ನು ನಟ್ಟು, ಗಿಡವಾದ ಬಳಿಕ ಅಕ್ಕರೆಯಿಂದ ನೀರೆರೆದು ಸಾಕುತಲಿದ್ದು, ತರುವಾಯ ಆತರುವು ಹೂತು ಹಣ್ಣುಬಿಡದೆ ಗೊಡ್ಡಾದರೆ,

ಆದರಿಂದ ನಿನ್ನ ಮನಸ್ಸಿಗೆನೋವುಂಟಾಗುವುದಿಲ್ಲವೆ?ಹಾಗೆಯೇ-ನಿನ್ನವನಾದ ಈನಾನು ಸಂತಾನ ಶೂನ್ಯನಾಗಿರುವಲ್ಲಿ, ಇಂತಹ ನನ್ನನ್ನು ನೋಡಿ,ನೀನುಸಂಕಟಪಡದಿರಬಹುದೆ? ಎಲೈ ಪೂಜ್ಯನೇ! ಮಜ್ಜನಕ್ಕೆ ಬಿಡದೆ ಬಂದೆಡೆಯಲ್ಲಿಯೇ ಕಟ್ಟಿದ್ದರೆ, ಆ ಕಟ್ಟುಗೊತ್ತು ಆನೆಯನ್ನು ಸಂಕಟ ಪಡಿಸುವ ಹಾಗೆ, ಪಿತೃಗಳ ಕಟ್ಟಕಡೆಯ ಸಾಲವು ಸಂತತಿಯಿಲ್ಲದ ನನ್ನನ್ನು ತಡೆಯಲಾಗದ ತಾಪಕೊಳ್ಳಗುಮಾಡಿದೆ, ಇದೇ ನನ್ನ ಮುಗಿವಳಿಯ ಬಿನ್ನಪವು. ನಾನಾರುಣದಿಂದ ಮುಕ್ತನಾಗುವುದೆಂಬುದು ನಿನ್ನ ಕರಗತವಾಗಿದೆ. ಏಕೆಂದರೆ- ಇಕ್ಷ್ವಾಕು ಕುಲವರಸರಿಗೆ ಆಸದಳವೆನಿಸಿದ ಆಯುವು ನಿನ್ನಿಂದಾಗ ತಕ್ಕುದು ಎಂಬುದು ಸಿದ್ಧವಾಗಿಯೇ ಇದೆ ಎಂದು ಹೇಳಿ ಸುಮ್ಮನಾದನು.

ಇಂತಾ ದಿಲೀಪನ ಬಿನ್ನಪವನಾಲಿಸಿ, ತಪೋನಿಧಿಯಾದ ಮುನಿಯು ಮೌನದಿಂದ ಅರೆಮುಗಿದ ಕಣ್ಣುಗಳುಳ್ಳವನಾಗಿ, ಎವೆಯಿಕ್ಕದೆ, ಮಲಗಿದ ಮೀನುಳ್ಳ ಮಡುವಿನಂತೆ ಅರೆಗಳಿಗೆಯವರೆಗೆ ಅಲುಗದೆ ಸುಮ್ಮನಿದ್ದು, ಚಿತ್ತೈಕಾಗ್ರ್ಯದಲ್ಲಿ ಸಮಾಧಿ ದೃಷ್ಟಿಯಿಂದ ಅರಸಿನ ಸಂತಾನಲಾಭದ ತಡೆಗೆ ಕಾರಣವನ್ನರಿತು, ತರುವಾಯ ಧರಾನಾಥನಂಕುರಿತು ಇಂತೆಂದನು:-

ಎಲೈ ಧರಣಿಪಾಲನೆ! ಕೇಳು - ಪೂರ್ವದಲ್ಲಿ ಒಂದುವೇಳೆ ನೀನು ಸ್ವರ್ಗಕ್ಕೆ ತೆರಳಿದ್ದು, ಇಂದ್ರನನ್ನುಸೇವಿಸಿ, ಮರಳಹಿಂದಿರುಗಿ ಬರುತ್ತಿರುವಾಗ- ನಿನ್ನ ಹಾದಿಯಲ್ಲಿಯೇ ಕಲ್ಪವೃಕ್ಷದ ತಡಿಯಲ್ಲಿ ಕಾಮಧೇನುವು ವಿಶ್ರಮಿಸಿಕೊಂಡಿದ್ದಿತು, ಅಂದು ಈ ನಿನ್ನ ಹೆಂಡತಿಗೆ ಋತುಸ್ನಾನದ ದಿವಸವಾಗಿದ್ದಿತು, ಆದಕಾರಣ ಧರ್ಮ ಲೋಪವಾಗುವುದೆಂಬ ಭಯದಿಂದ ನೀನು ಈಕೆಯನ್ನೇ ಮನದೊಳಗೆ ನೆನೆಯುತ್ತ ಬರುತಲಿದ್ದೆ, ಪ್ರದಕ್ಷಿಣೆ, ನಮಸ್ಕಾರ ಮುಂತಾದ ಪೂಜೆಗೆ ಯೋಗ್ಯವಾಗಿದ್ದರೂ ಆ ಧೇನುವಿಗೆ ಉಚಿತಸತ್ಕಾರವನ್ನು ಆಚರಿಸಲಿಲ್ಲ, ಆಗಲಾ ಧೇನುವಿಗೆ ತನ್ನನ್ನು ತಿರಸ್ಕರಿಸಿದನೆಂದು ಸಿಟ್ಟುಹತ್ತಿತು. ಆ ಬಳಿಕ "ನನ್ನನ್ನು ಅಸಡ್ಡೆಮಾಡಿದೆಯಾದ ಕಾರಣ ನನ್ನ ಸಂತತಿಯನ್ನು ಪೂಜಿಸದೆ ನಿನಗೆ ಸಂತಾನ ಲಾಭವುಂಟಾಗದು" ಎಂದು ನಿನಗೆ ಶಾಪವನ್ನು ಕೊಟ್ಟಿತು, ಆಗಲಲ್ಲಿ-ಬಾಂದೊರೆಯೊಳಗೆ ಇಂದ್ರನಾನೆಯು ಮಜ್ಜನಮಂ ಗೆಯ್ಯುತಲಿದ್ದಿತು, ಹೊಳೆಯ ಶಬ್ದವು ಬಲವಾಗಿದ್ದುದರಿಂದ ಆಧೇನುವಿನ ಶಾಪದ ಬಿರುನುಡಿಯು ನಿನಗಾಗಲಿ

ನಿನ್ನ ಸಾರಥಿಗಾಗಲಿ ಕೇಳಬರಲಿಲ್ಲ, ಇಂತಾ ಸುರಭಿಯ ಮನ್ನಣೆಗೆ
ಕೊರತೆಯುಂಟಾದುದೇ ನಿನ್ನ ಕೋರಿಕೆಯು ಕೈಗೂಡದಿರಲು ಕಾರಣ
ವಾಯಿತು. ಲೋಕದಲ್ಲಿ ಮಾನ್ಯರನ್ನು ಮಾನಿಸದೆ ಮೀರುವುದು ಮೇ
ಲ್ಮೆಗೆ ಅಡ್ಡಿಯೆಂದು ತಿಳಿ. ಈಗಲಾ ಸುರಸುರಭಿಯನ್ನೇ ಸೇವಿಸಿ ಅನುಗ್ರ
ಹವನ್ನು ಪಡೆದು ಬರೋಣ ಎಂದರೆ – ಪಾತಾಳಲೋಕದಲ್ಲಿ ವರುಣನು
ಯಜ್ಞವನ್ನು ಮಾಡುತ್ತಿರುವನು, ಹೋಮ ಸಾಧನವಾದ ಹಾಲುಮೊಸ
ಗು ತುಪ್ಪ ಮೊದಲಾದುದನ್ನು ಹವಣಿಸಿಕೊಡಲು ಹೋಗಿರುವುದು, ಅ
ಲ್ಲಿಗೇ ಹೋಗಿ ಬರಬಹುದೆಂದರೆ-ಪಾತಾಳದ ಬಾಗಿಲು ಸರ್ಪಗಳ ಕಾವ
ಲಿನಿಂದ ಒಳ ಹೊಗಲಸದಳವಾಗಿದೆ. ಆದಕಾರಣ ಆಸುರಭಿಗೆ ಬದಲಾಗಿ
ಅದರ ನಂದನೆಯಾದ ಈ ನಂದಿನಿಯನ್ನು ನಿನ್ನ ಧರ್ಮಪತ್ನಿಯೊಡನೆ ಪರಿಶು
ದ್ಧನಾಗಿ ಆರಾಧಿಸು. ಸುಪ್ರೀತವಾದ ಈ ಧೇನುವೇ ನಿನ್ನ ಕೋರಿಕೆಯ
ನ್ನೆಲ್ಲ ಈಡೇರಿಸುವುದು ಎಂದಿಂತು ವಶಿಷ್ಠಮುನಿಯು ವಸುಧಾಧಿಪನೊ
ಡನೆ ಉಸಿರುತ್ತಿದ್ದನು, ಹುಲ್ಲುಮೇಯಲಿಕ್ಕೆ ತೆರಳಿದ್ದ ನಂದಿನಿಯೆಂಬ
ಶ್ರೇಷ್ಠವಾದ ಆ ಮುನಿಧೇನುವು ಕಾಡಿನಿಂದ ಹಿಂದಿರುಗಿ ಆ ಹೊತ್ತಿಗ ಸರಿ
ಯಾಗಿ ಬಂದು ಶುಭವನ್ನು ಸೂಚಿಸಿತು. ಮತ್ತು-ಕಪಿಲವರ್ಣದ ಆ ಆಕ
ಳು ಹಣೆಯಲ್ಲಿ ಡೊಂಕಾಗಿ ಬೆಳೆದ ಚೆಳ್ಗದಲಿನ ಹುಟ್ಟುಮಚ್ಚೆಯಿಂ
ದ, ಚಂದಿರನಿಂದ ಸಂಜೆಯು ಬೆಳಗುವಂತೆ ಕಂಗೊಳಿಸುತಲಿದ್ದಿತಲ್ಲದೆ
ಎಳೆಗರುವನ್ನು ಕಂಡಕೂಡಲೆ ಕುಂಭದಂತೆ ತೋರವಾದ ತನ್ನ ಕೆಚ್ಚಲಿ
ನಿಂದ ಹನಿಯಿಸುತ, ಯಾಗದ ಮುಗಿವಳಿಯಲ್ಲಿನ ಮಂಗಳ ಸ್ನಾನಕ್ಕಿಂ
ತಲೂ ಶುಭಕರವೆನಿಸಿದ, ತುಸಬಿಸಿಯಾಗಿರುವ ಹಾಲಿನಿಂದ ನೆಲವನ್ನು ನ
ನೆಯಿಸುತ ನಿಂತಿತು. ಇದರಮೇಲೆ – ತನ್ನ ಕಾಲಗೊರಸಿನ ತುಳಿತದಿಂ
ದೆದ್ದ ಧೂಳಿಗಳ ಸಂಸ್ಪರ್ಶದಿಂದ ಹತ್ತಿರದಲ್ಲಿರುವ ಮಹೀಪತಿಗೆ ತೀರ್ಥ
ಸ್ನಾನಕಿಂತ ಅಧಿಕವಾದ ಪವಿತ್ರತೆಯನ್ನುಂಟುಮಾಡಿತು. ಆಗ ಶಕು
ನ ಶಾಸ್ತ್ರವನ್ನೆಲ್ಲ ಬಲ್ಲ ತಪೋನಿಧಿಯು-ದರ್ಶನಮಾತ್ರದಿಂದ ಪಾವನಮಂ
ಗೈವನಂದಿನಿಯು ಇರವಂಕಂಡು, ಶಿಷ್ಯನಮನದಣಿಕೆಯು ಕೈಗೂಡುವು
ದೆಂದು ಬಗೆದು, ಭೂನಾಥನಂ ಕುರಿತು ಮತ್ತಿಂತೆಂದನು—

ಎಲೈ ರಘುಕುಲ ಲಲಾಮನೇ! ಮಂಗಳಾಂಗಿಯಾದ ಈ ನಂದಿನಿ
ಯು ತನ್ನ ಹೆಸರನ್ನು ಹೇಳುತ್ತಿರುವ ಸಮಯಕ್ಕೆ ಸರಿಯಾಗಿ ಬಂದು

ನಿಂತಿತಾದಕಾರಣ ನಿನ್ನ ಮನೋರಥವು ಬಹುಬೇಗನೆ ಸಿದ್ಧಿಸುವುದೆಂದು ಭಾವಿಸು. ಇನ್ನುಮೇಲೆ ನಿಯಮಾಧ್ಯಯನದಿಂದ ವಿದ್ಯೆಯನ್ನು ಪಡೆಯುವ ಹಾಗೆ, ಮುನಿ ವೃತ್ತಿಯುಳ್ಳವನಾಗಿ ನಿತ್ಯವೂ, ಈ ಧೇನುವನ್ನು ಹಿಂಬಾಲಿಸಿ, ಸೇವಿಸುತ್ತಿದ್ದು ಅನುಗ್ರಹವನ್ನು ಪಡೆ, ಆದರೆ-ವನದೊಳಗೆ ಈ ಸುರಭಿಯು ಮುಂದೆ ಹೊರಟರೆ ನೀನು ಅದರ ಹಿಂದೆಯೇ ನಡೆ, ನಿಂತಾಗ ನಿಲ್ಲು, ಕುಳಿತಾಗ ಕೂಡು, ಅದು ನೀರು ಕುಡಿದರೆ ನೀನೂ ಕುಡಿ. ಇದೇ ಸೇವಾಪ್ರಕಾರವೆಂದರಿ. ಮತ್ತು-ನಿನ್ನ ಈ ಧರ್ಮಪತ್ನಿಯು-ನಿತ್ಯವೂ ಭಕ್ತಿ ಭರಿತಳಾಗಿ ಮುಂಜಾನೆಯಲ್ಲಿ ಈ ಧೇನುವನ್ನು ಗಂಧ ಪುಷ್ಪಾಕ್ಷತೆಗಳಿಂದ ಅರ್ಚಿಸಿ, ತಪೋವನದ ಎಲ್ಲೆಯವರೆಗೂ ಅದನ್ನು ಹಿಂಬಾಲಿಸುತ್ತಲೂ, ಹಾಗೆಯೇ ಸಂಜೆಯಲ್ಲಿ ಇದಿರ್ಗೊಳ್ಳುತಲೂ ಇರಬೇಕು. ನಿನ್ನಲ್ಲಿ ಅನುಗ್ರಹ ವುಂಟಾಗುವವರೆಗೂ ನಾನು ಹೇಳಿದ ರೀತಿಯಿಂದ ನೀನು ಈ ಧೇನುವಿನ ಸೇವೆಯಲ್ಲಿ ತಪ್ಪದೆ ಆಸಕ್ತನಾಗಿರು. ನಿನ್ನ ಕಾರ್ಯವು ನಿರ್ವಿಘ್ನವಾಗಿ ನಡೆಯಲಿ, ಯೋಗ್ಯರಾದ ಮಕ್ಕಳನ್ನು ಪಡೆದಿರುವವರೊಳಗೆ ನೀನು ಅಗ್ರಗಣ್ಯನಾಗು ಎಂದು ಹರಸಿದನು.

ಆ ಬಳಿಕ-ಮುನಿಯ ಪ್ರಿಯ ಶಿಷ್ಯನಾದ ದಿಲೀಪನು - ಪತ್ನೀಸಹಿತನಾಗಿ, ತಪೋನಿಧಿಯು-ಅಗ್ನಿಸಾನ್ನಿಧ್ಯವಲ್ಲಿ ಪ್ರೀತಿಪೂರ್ವಕವಾಗಿ ಹೇಳಿದ ನುಡಿಯು ಎಂದಿಗೂ ಸಟೆಯಾಗ ತಕ್ಕುದಲ್ಲವೆಂದು ಭಾವಿಸಿ, ಆನಂದ ಭರಿತನಾಗಿ, ಬಾಗಿದಶಿರಸ್ಸಿನಿಂದ ತಮ್ಮಪ್ಪಣೆಯಂತಾಗಲೆಂದು ಒಪ್ಪಿಕೊಂಡನು. ಆ ಹಿಂದೆ ವಿದ್ಯಾವಂತನೂ, ಬ್ರಹ್ಮಮಾನಸ ಪುತ್ರನೂ ಸತ್ಯ ಪ್ರಿಯವಚನನೂ ಅಗಿರುವ ಮುನಿಯು-ರಾತ್ರಿ ಹೆಚ್ಚುತ್ತ ಬರುವುದನ್ನು ಕಂಡು, ವಿಶ್ವಂಭರಾಧಿಪತಿಗೆ ವಿಶ್ರಮಿಸಿಕೊಳ್ಳಲಿಕ್ಕೆ ಅಪ್ಪಣೆಯನಿತ್ತನು.

ಆದರೆ-ತಪೋನಿಧಿಯಾದ ವಶಿಷ್ಠನು-ತನ್ನಯ ತಪೋಮಹಿಮೆಯಿಂದಲೆ ಆತನಿಗೆ ರಾಜಾರ್ಹವಾದ ಸಕಲ ಸಲಕರಣೆಗಳನ್ನೆಲ್ಲ ಅಣಿಮಾಡಿಕೊಡುವಷ್ಟು ಶಕ್ತನಾಗಿದ್ದರೂ, ಶಾಸ್ತ್ರದಪ್ರಕಾರ ಅರಸನನ್ನು ನಿಯಮಪರನನ್ನಾಗಿ ಇಟ್ಟಿರಬೇಕಾದುದು ಧರ್ಮವೆಂದು ಭಾವಿಸಿ, ವನವಾಸೋಚಿತವಾಗಿರುವ ದರ್ಭೆಯ ಹಾಸಿಗೆಯೇ ಮುಂತಾದ ಸಾಮಗ್ರಿಯನ್ನು ಒದಗಿಸಿಕೊಟ್ಟನು.

ತದನಂತರದಲ್ಲಿ ದಿಲೀಪಮಹಾರಾಜನು-ಕುಲಪತಿಯಾದ ಮುನಿಯು ತೋರಿದ ಎಲೆಮನೆಯನ್ನು ತನ್ನ ಧರ್ಮಪತ್ನಿಯೊಡನೆ ಒಳಹೊಕ್ಕು, ಪರಿಶುದ್ಧನಾಗಿ, ಸೇಮದಿಂದಿರುವ ಆಕೆಯೊಡನೆ ದರ್ಭೆಯಹಾಸಿಗೆಯಲ್ಲಿ ಪವಳಿಸಿದ್ದು, ಬೆಳಗಿನ ಜಾವದಲ್ಲಿ ಮುನಿಶಿಷ್ಯರ ಅಧ್ಯಯನಾವೃತ್ತಿಯಿಂದ ಬೆಳಗಾಗುತ ಬಂದಿತೆಂದು ತಿಳಿದು ಎಚ್ಚತ್ತನು.

— ಇಂತು ವಶಿಷ್ಠಾಶ್ರಮಗಮನವೆಂಬ ಪ್ರಥಮಾಧ್ಯಾಯಂ. —



ಶ್ರೀಃ.

## ದ್ವಿತೀಯಾಧ್ಯಾಯಂ.



ಸೂಚನೆ॥ ಸುರಭಿಯು ತನ್ನಂ ಸೇವಿಪ
ನರಪನ ಗುರುಭಕ್ತಿಯರಿದು ಮೆಚ್ಚುತೆ ವರಮಂ ॥
ಕರುಣಿಸೆ ಯಶಸಿತಿ ಬಾಂದೊರೆ
ಹರತೇಜವ ತಳೆದ ತೆರದಿ ಗರ್ಭವ ತಾಳ್ದಳ್ ॥

ಆ ಮೇಲೆ ಚೆನ್ನಾಗಿ ಬೆಳಗಾಯಿತು, ಅರಸಿತಿಯೂ ಎಚ್ಚತ್ತು ಹೂವು, ಗಂಧ ಮೊದಲಾದವುಗಳಿಂದ ಆಕಳನ್ನು ಪೂಜಿಸಿದಳು, ಬಳ್ಳಿಯ ಹೆಸರುವಾಸಿಯನ್ನೇ ಹಣವನ್ನಾಗಿ ತಿಳಿದವನೆನಿಸಿದ ಜನರೊಡೆಯನು – ಹಾಲುಕುಡಿದ ಕರುವನ್ನು ಕಟ್ಟಿದ ಬಳಿಕ ಕಾಡಿನಲ್ಲಿ ಮೇಯಿಸಲಿಕ್ಕೆ ಮುನಿಧೇನುವನ್ನು ಕಣ್ಣಿಯ ಕಳಚಿ ಬಿಟ್ಟನು. ತರುವಾಯ-ಹೆಜ್ಜೆಯೂರಿದ ತಾವನ್ನೆಲ್ಲ ಪವಿತ್ರವಾದುದನ್ನಾಗಿ ಮಾಡುತ ಆಕಳು ಮುಂದೆ ಹೊರಟಿತು, ಗರತಿಯರೊಳಗೆ ಮೊದಲನೆಯವಳೆನಿಸಿದ ಸುದಕ್ಷಿಣೆಯು-ತಪಸ್ವಿಯ ಆಣತಿಯಂತೆ ತಪೋವನದ ಎಲ್ಲೆಯವರೆಗೂ ಅದನ್ನು ಹಿಂಬಾಲಿಸ ತೊಡಗಿದಳು, ವೇದಾರ್ಥವನ್ನು ಅನುಸರಿಸುವ ಸ್ಮೃತಿಯಂತೆ ಕಂಗೊಳಿಸಿದಳು. ಬಳಿಕ ಯಶೋವಂತನೆನಿಸಿ ಮನೋ

ಹರಸಾಗಿರುವ ದೊರೆಯು ಬಹುದಯಾಳು, ಪತ್ನಿಯನ್ನು ಅಲ್ಲಿಂದ ಹಿಂದಕ್ಕೆ ಕಳುಹಿ, ನಾಲ್ಕು ಕಡಲುಗಳನ್ನು ನಾಲ್ಕು ಮೊಲೆಗಳನ್ನಾಗಿ ಮಾಡಿಕೊಂಡು ಗೋರೂಪವನ್ನು ಧರಿಸಿದ ಧರೆಯಂ ಪೊರೆಯುವಷ್ಟು ಪ್ರಯತ್ನದಿಂದ ನಂದಿನಿಯನ್ನು ಮುನಿಯಾಣತಿಯಂತೆ ಸಂರಕ್ಷಿಸ ತೊಡಗಿದನು. ಇದಲ್ಲದೆ - ಆ ಆಕಳನ್ನು ಕಾಪಿಡುವ ನೋಂಪಿಯಲ್ಲಿ ತಾನೊಬ್ಬನೇ ಕಂಕಣವನ್ನು ಕಟ್ಟಿಕೊಂಡಿರುವುದರಿಂದ ತನ್ನನ್ನು ಹಿಂಬಾಲಿಸಿ ಬರುತಲಿದ್ದ ಇತರ ಅನುಚರರನ್ನೂ ಹಿಂದಿರುಗ ಹೇಳಿದನು. ಮನುವಂಶದರಸರೆಲ್ಲ ತಂತಮ್ಮ ತೋಳುಬಲದಿಂದಲೇ ತಮ್ಮನ್ನು ಕಾಪಾಡಿಕೊಂಬುದು ವಾಡಿಕೆ, ಈತನ ಶರೀರ ಸಂರಕ್ಷಣೆಯ ವಿಷಯದಲ್ಲಿ ಪರಾಪೇಕ್ಷೆಯೇ ಇಲ್ಲ. ಅಸಹಾಯಶೂರರಸಲ್ಲವೆ ?

ಬಳಿಕಲಾ ಪೊಡವಿಯೊಡೆಯನು ಪಶುವಂ ಪೊರೆದ ಪರಿಯೆಂತೆಂದರೆ:—ಬಾಯಿಸವಿಯಾಗಿರುವ ಎಳೆಹುಲ್ಲಿನ ಹಿಡಿಗಳನ್ನು ಕೊಡುತಬಂದನು, ಆಗಾಗ ಆಕಳಿನ ಮೈತುರಿಸುತಲಿದ್ದನು, ಅದರ ಮೈಮೇಲೆ ನೊಣಗಳು ಒಂದು ಕುಳಿತರೆ ಮೈತಡವಿ ಹಾರಿಸುತಲಿದ್ದನು, ಅದು ಹೇಗೆ ಹೇಗೆ ತಿರುಗಿಸಡೆದರೆ ಹಾಗ ಹಾಗೆಲ್ಲ ತಾನೂ ಅದರ ಮನಸ್ಸೊಪ್ಪುವಂತೆ ಅನುಸರಿಸುತಲಿದ್ದನು. ನಿಂತರೆ ನಿಂತುಕೊಂಬನು, ಹೊರಟರೆ ಮುಂದರಿವನು, ಮಲಗಿದರೆ ಕುಳಿತುಕೊಂಬನು, ಜಲಪಾನವನ್ನು ಮಾಡಿದರೆ ತಾನೂ ನೀರನ್ನು ಕುಡಿವನು. ಈ ಪ್ರಕಾರ ಅದರ ನೆಳಲು ಹೇಗೋ ಹಾಗೆ ಅನುವರ್ತಿಸುತ್ತಿದ್ದನು, ಹೀಗೆ ಬರುತಲಿರುವರಾಜನು- ತನ್ನ ದೊರೆತನದ ತೊಡವಾಗಿರುವ ಛತ್ರ ಚಾಮರಗಳನ್ನು ತೆಗೆದಿಟ್ಟು ಬಂದಿದ್ದರೂ ಮುಖದಲ್ಲಿ ಬೆಳಗುವ ಹೊಳಪಿನಿಂದ, ನೋಡಿದವರಿಗೆ 'ಈತನು ದೊರೆಯೇಸರಿ' ಎಂದು ಊಹಿಸಲು ತಕ್ಕವನಾಗಿದ್ದನು. ಇದರಿಂದ ಹೊರಗೆ ಕಾಣಬರದ ಮದಜಲಧಾರೆಯನ್ನೊಳಗೊಂಡಿರುವ ಕೊಬ್ಬಿದ ಮದದಾನೆಯಂತೆ ಕಾಣಬರುತ್ತಿದ್ದನು. ಆ ಮೇಲೆ ಸಣ್ಣಸಣ್ಣ ಬಳ್ಳಿಗಳನ್ನು ತೆಗೆದು ಸುರಳಿಯನ್ನು ಸುತ್ತಿ ಕೆದರಿದ್ದ ತಲೆಗೂದಲನ್ನೆಲ್ಲ ಪರಗಟ್ಟಿದನು, ಹೆದೆಯನ್ನೇರಿಸಿದ ಬಿಲ್ಲನ್ನು ಕಯ್ಯಲ್ಲಿ ಹಿಡಿದನು, ಮುನಿಯ ಆಕಳನ್ನು ಕಾಪಿಡುವ ನೆಪದಿಂದ ಕಾಡೊಳಿರುವ ಕೆಟ್ಟ ಮಿಕಗಳನ್ನು ಸದೆಬಡಿಯಲುಜ್ಜುಗಿಸಿರುವವನಂತೆ ಕಾಣಬರುತ ಸಂಚರಿಸುತ್ತಿದ್ದನು.

ದಿಲೀಪ ಮಹಾರಾಜನೇನು ಸಾಧಾರಣನೆ? ಮಹಾನುಭಾವನಾದ ಚಕ್ರವರ್ತಿಯಲ್ಲವೆ? ಆತನ ಮಹಿಮೆಯು ಲೋಕದಲ್ಲೆಲ್ಲ ಹರಡಿಕೊಂಡಿದ್ದಿತು, ಆ ಮಹಾರಣ್ಯದಲ್ಲಿಯೂ ಕಾಡುಮರ ಮೊದಲಾದವುಗಳೂ ಆತನಿಗೆ ರಾಜೋಪಚಾರವನ್ನು ಮಾಡುವಂತೆ ಕಾಣಬಂದುವು:—

ವರುಣನಿಗೆಣೆಯೆನಿಸಿದ ಮಹಾರಾಜನು ಅರಣ್ಯದ ದಾರಿಯುದ್ದಕ್ಕೂ ಬರುತಲಿರುವಾಗ-ಹತ್ತಿರದಲ್ಲಿ ಹೊಗಳು ಭಟರಿಲ್ಲ, ಇಕ್ಕೆಲದ ಸಾಲುಮರಗಳು-ತಮ್ಮಲ್ಲಿ ಕುಳಿತು ಕೊಬ್ಬಿ ಕೂಗುತಲಿರುವ ಹಕ್ಕಿಗಳ ದನಿಯ ನೆಪದಿಂದ "ಮಹಾರಾಜನಿಗೆ ಜಯವಾಗಲಿ, ಪರಾಕು" ಎಂದೀಪ್ರಕಾರ ವೈತಾಳಿಕರ ಕೆಲಸವನ್ನು ಮಾಡುವಂತಿದ್ದುವು. ದೊರೆಯು-ಊರು ಬಿಟ್ಟು ಹೊರಗೆ ಹೊರಡುವಾಗ, ಪುರವಾಸಿಗಳಾದ ಹೆಣ್ಣುಮಕ್ಕಳು ಮಂಗಳಕರವಾದ ಅರಳನ್ನು, ಅರಸಿನ ಶಿರದಮೇಲೆ ಎರಚುವುದು ವಾಡಿಕೆ. ಇಲ್ಲಿಯೂ ಮರಗಳ ಮೇಲೆ ಹಬ್ಬಿರುವ ಎಳೆಬಳ್ಳಿಗಳು-ಅಗ್ನಿಯಂತೆ ಬೆಳಗುತ ಪೂಜ್ಯನೆನಿಸಿ, ತಮ್ಮ ಬಳಿಯೊಳು ಬರುತಲಿರುವ ಆತನನ್ನು, ಎಲರಿನಿಂದ ಅಲುಗಿ, ತಮ್ಮಿಂದ ಉದುರುತಲಿರುವ ಹೂಗಳಿಂದ ಅರ್ಚಿಸುವಂತಿದ್ದುವು. ಯದ್ಯಪಿ-ಅರಸು ಹೆರರನ್ನಂಜಿಸುವ ಬಿಲ್ಲನ್ನು ಕಯ್ಯಲ್ಲಿ ಹಿಡಿದು ಬರುತಲಿದ್ದಾನೆ. ಆದರೂ, ಈತನು ಬಹು ಶಾಂತನೂ, ಮನೋಹರನೂ ಆಗಿ, ದಯಾರಸದಿಂದ ತುಂಬಿದ ಮನಸ್ಸುಳ್ಳವನೆಂದು ಹತ್ತಿರದಲ್ಲಿ ಮೇಯುತಲಿರುವ ಹುಲ್ಲೆಗಳಅಂತಃಕರಣಕ್ಕೆಗೊತ್ತಾಗುತಲಿದ್ದಿತು,ಅದರಿಂದಲೇ ಅವುದಾರಸರಿಯುವ, ತಲೆಯನ್ನೆತ್ತಿ, ಅಲುಗದೆಯೂ, ರೆಪ್ಪೆಬಡಿಯದೆಯೂ, ಆತನನ್ನು ನಿರ್ಭಯವಾಗಿ ನೋಡುತ್ತಿದ್ದುವು, ತಮ್ಮ ಕಣ್ಣುಗಳು ಬಲು ಅಗಲವಾಗಿ ಹುಟ್ಟಿದುದು ಸಫಲವಾಯಿತೆಂದು ಸಂಭಾವಿಸುವಂತೆ ಕಾಣಬಂದುವು. ನಿರ್ಮಲವಾದ ಇಲ್ಲವೆ ಮಲಿನವಾದ ಮನಸ್ಸೇ, ಇವನು ಗೆಳೆಯ, ಅಥವಾ ಹಗೆ ಎಂಬುದನ್ನು ಸೂಚಿಸುತ್ತದೆಯಲ್ಲವ? ಹೀಗೆ ಇನ್ನು ಸ್ವಲ್ಪ ಮುಂದೆ ಬರುವಲ್ಲಿ-ಬಿದಿರುಮೆಳೆಗಳ ಜಳಮೆಯ ಸಂದುಗಳೊಳಗೆ ಗಾಳಿಯು ತೂರಿ ಸದ್ದಾಗುತಲಿದ್ದುದರಿಂದ, ವನದೇವತೆಗಳು-ಪ್ರೊದೆಗಳಲ್ಲಿ ಕುಳಿತು, ಕೊಳಲನ್ನೂದುತ, ತನ್ನ ವಂಶಾವಳಿಯ ಹೆಸರುವಾಸಿಯನ್ನು, ಹಾಡುಗಳನ್ನಾಗಿ ಹೇಳಿಕೊಳ್ಳುವಂತಿರುವುದನ್ನು ಕೇಳುತ ಬಂದನು. ಅಷ್ಟು ಹೊತ್ತಿಗೆ ಬೆಟ್ಟಗಳ ಸಂದು ಹೊಳೆಗಳ ತುಂತುರು ಹನಿಗಳಿಂದ ನೆನೆದು, ಕಾಡುಮಲ್ಲಿಗೆಗಳ

ನ್ನಲುಗಿಸಿ, ಅವುಗಳಲ್ಲಿನ ಹೂವಿನ ಕಂಪನ್ನೊಳಗೊಂಡು, ಹರಿದು ಬರುವ ಮಾರುತವು - ಬಹುದೂರದಿಂದ ನಡೆದು, ವ್ರತಪರಿಪಾಲನೆಗಾಗಿ ಹಿಡಿಯು ಲಿಕ್ಕೆ ಕೊಡೆಯಿಲ್ಲವೆ, ಬಳಲುತಲಿರುವ ಸದಾಚಾರ ಸಂಪನ್ನನಾದ ಅರಸ ನನ್ನು ಸೇವಿಸುತಲಿದ್ದಿತು. ಮಹಾ ಧಾರ್ಮಿಕನಾದ ದೊರೆಯ ಮಹಿಮೆಯು ಇಷ್ಟೆಂದು ಹೇಳಲಳವಲ್ಲ, ಆ ನಾಡಿನೊಡೆಯನು ಕಾಡನ್ನು ಹೊಕ್ಕಕೂ ಡಲೆ-ಹತ್ತಿರದಲ್ಲಿ ಉರಿಯುತಲಿದ್ದ ಕಾಡ್ಗಿಚ್ಚು ಮಳೆಗರೆಯದಿದ್ದರೂ ಆರಿ ತಣ್ಣಗಾಗುತ್ತಿತ್ತು, ಮರಗಿಡ ಬಳ್ಳಿಗಳಲ್ಲಿ ಹೂವು ಹಣ್ಣುಗಳ ಬೆಳೆಯು ಹುಲುಸಾಗುತಲಿದ್ದಿತು, ಬಲಾಧಿಕವಾದ ಹುಲಿ, ಸಿಂಹ ಮೊದಲಾದ ಘಾತುಕ ಜಂತುಗಳು-ಬಲಹೀನವಾದ ಹುಲೆ ಮುಂತಾದ ಪ್ರಾಣಿಯನ್ನು ಹಿಂಸಿಸುತಲಿರಲಿಲ್ಲ.

ಸಂಜೆಯಾಗುತ ಬಂದಿತು. ಹೊಸ ತಳಿರಿನಂತೆ ಕೆಂಬಣ್ಣದ ಸೂ ರ್ಯ ಪ್ರಭೆಯು-ತನ್ನ ಸಂಚಾರದಿಂದ ಎಲ್ಲ ದೆಸೆಗಳನ್ನೂ ಪವಿತ್ರವಾದವು ಗಳನ್ನಾಗಿ ಮಾಡಿ ಅಸ್ತಾಭಿಮುಖವಾಯಿತು, ಹಾಗೆಯೇ ಇರುವ ಮುನಿ ಧೇನುವೂ ತನ್ನ ಮನೆಯ ಕಡೆಗೆ ಹೊರಟಿತು. ಬಳಿಕ ನೆಲದೊಡೆಯನಾದ ದಿಲೀಪನು - ದೇವತೆಗಳು, ಪಿತೃಗಳು, ಅತಿಥಿಗಳು ಈ ಮೊದಲಾದವರ ಸತ್ಕಾರಕ್ಕೆ ಸಾಧಕವಾಗಿರುವ ಆ ಧೇನುವನ್ನನುಸರಿಸಿ, ತಾನೂ ಹಿಂದಿರು ಗಿದನು. ಸಜ್ಜನಪೂಜ್ಯವಾದ ಆಕಳು ಮುಂದೆಯೂ, ಸಾಧುಮಾನ್ಯನಾದ ಅರಸು ಹಿಂದೆಯೂ ಬರುತಲಿದ್ದರು, ಆಗಸತ್ಪುರುಷ ಸಮ್ಮತವೆನಿಸಿ ಶರೀ ರವನ್ನಾಂತು ಬಂದಿರುವ ವಿಧಿಯಿಂದೊಡಗೂಡಿದ ಶ್ರದ್ಧೆ (ಆಸ್ತಿಕ್ಯಬುದ್ಧಿ) ಯಂತೆ ಶೋಭಿಸುತಲಿದ್ದರು. ಆ ಸಂಜೆಯ ಹೊತ್ತಿನೊಳಗೆ ಅಲ್ಲಲ್ಲಿ ಕೊಳಗಳಿಗೆ ಇಳಿಯಬಿದ್ದಿದ್ದ ಹಂದಿಗಳ ಹಿಂಡು ಮೇಲಕ್ಕೆ ಹತ್ತುತಲಿ ದ್ದಿತು. ನವಿಲುಗಳು-ತಮ್ಮ ವಾಸವೃಕ್ಷಗಳ ಕಡೆಗೆ ಹಾರಿಹೋಗುತಲಿ ದ್ದವು. ಹಸಿರು ಹುಲ್ಲಿನ ಬೈಲುಗಳಲ್ಲಿ ಹುಲ್ಲೆಗಳು ಗುಂಪು ಕೂಡುತಲಿ ದ್ದವು. ಆಗ - ಕಪ್ಪಗೆ ಕಾಣಬರುವ ಕಾಡುಗಳನ್ನು ನೋಡುತ್ತಾ, ಬರುತ್ತಿದ್ದನು. ಹಾಲು ತುಂಬಿದ ಕೆಚ್ಚಲಿನ ಹೊರೆಯನ್ನು ಹೊರಲಾ ರದೆ ಅಲ್ಲಾಟದ ಮುದ್ದು ನಡಗೆಯಿಂದ ಮುಂದೆ ಬರುವ ಬಂಟಿಗರುವಿನ ಆ ಕನ್ನೆಗಡಸೂ, ಸುಖಶರೀರದ ಭಾರದಿಂದ ಜಗ್ಗುಹಾಕುತ ಹಿಂದೆ

ಬರುವ ಅರಸೂ ತಪೋವನದಿಂದ ಹಿಂದಿರುಗಿ ಬರುವ ದಾರಿಯನ್ನು ಅಂದವಾದ ತಮ್ಮ ನಡಗೆಯಿಂದ ಸಿಂಗರಿಸುತಲಿದ್ದರು.

ಅಷ್ಟು ಹೊತ್ತಿಗೆ ಸುದಕ್ಷಿಣೆಯು - ಪುಣ್ಯಾಶ್ರಮದ ಎಲ್ಲೆಯಲ್ಲಿ ನಿಂತು ಇದಿರುನೋಡುತ್ತಲಿದ್ದಳು. ವನದಿಂದ ಹಿಂದಿರುಗಿ ಮುಸಿಧೇನುವನ್ನು ಹಿಂಬಾಲಿಸಿ ಬರುತಲಿರುವ ತನ್ನ ಪ್ರಿಯವಲ್ಲಭನನ್ನು ರೆಪ್ಪೆ ಬಡಿಯದೆ ಉಪವಾಸವಿದ್ದವುಗಳಂತಿರುವ ಎರಡು ಕಣ್ಣುಗಳಿಂದಲೂ ತಣಿವಾರ ಕುಡಿದಳು. ಆ ಹಾದಿಯಲ್ಲಿ ದಿಲೀಪನ ಧರ್ಮಪತ್ನಿಯಿಂದ ಇದಿರ್ಗೊಳ್ಳಲ್ಪಟ್ಟುದೂ, ಪೃಥ್ವಿಯೊಡೆಯನಿಂದ ಮುಂದರಿಸಲ್ಪಟ್ಟುದೂ ಆಗಿರುವ ಆ ಧೇನುವು-ಹಗಲಿರುಳುಗಳ ನಡುವಣ ಸಂಜೆಯಂತೆ ಕಂಗೊಳಿಸುತಲಿದಿತು.

ಆಗಲಾ ಸುದಕ್ಷಿಣೆಯು-ಆ ಪಯಸ್ವಿನಿಗೆ ಬಲವಂದು, ತಲೆಬಾಗಿ ಅಡ್ಡಬಿದ್ದು, ಮನೋರಥಸಿದ್ಧಿಯ ಬಾಗಿಲಿನಂತಿರುವ ಆ ಧೇನುವಿನ ಕೋಡುಗಳ ಅಗಲವಾದ ನಡುಭಾಗವನ್ನು ಪುಷ್ಪಾಕ್ಷತೆಗಳಿಂದ ಪೂಜಿಸಿದಳು. ಆಹಾ! ಸಂಜೆಯವರೆಗೂ ಅಗಲಿದ್ದ ಎಳೆಗರುವಿನ ತಾಯಿಗೆ ತನ್ನ ಕಂದನನ್ನು ಕಾಣಬೇಕೆಂಬ ತವಕವು ಹೆಚ್ಚಲ್ಲವೆ? ಆದರೂ ದುಡುಕದೆ ನಿಂತು, ಅರ್ಚನೆಯನ್ನು ಆಧೇನುವು ಕೈಗೊಂಡಿತಲ್ಲಾ ಎಂದು ಆ ದಂಪತಿಗಳು ಆನಂದಿಸಿದರು. ಆದರೆ - ಆ ಧೇನುವಿನಂತಹ ಸತ್ಪಾತ್ರಗಳು (ಮಹಾತ್ಮರು)-ತಮ್ಮ ಪ್ರಿಯ ಭಕ್ತರಲ್ಲಿ ತೋರುವ ಅನುಗ್ರಹದ ಕುರುಹುಗಳಿಂದ ಇಷ್ಟಸಿದ್ಧಿಗಳು ಇದಿರಿನಲ್ಲಿವೆಯೆಂದೇ ಅರಿಯಬೇಕು.

ಇಂತಾದಬಳಿಕ-ಶೂರನಾದ ದಿಲೀಪನು-ತನ್ನ ಧರ್ಮಪತ್ನಿಯೊಡನೆ ಪರ್ಣಶಾಲೆಯನ್ನು ಹೊಕ್ಕು, ಸಹಧರ್ಮಿಣಿಯೊಡನೆ ಸುಖಾಸೀನನಾಗಿದ್ದ ವಶಿಷ್ಠ ಮುನಿಯ ಅಡಿದಾವರೆಗಳಿಗೆ ಅಭಿವಂದಿಸಿ, ಸಾಯಂಕಾಲದ ಅನುಷ್ಠಾನವನ್ನು ಆಚರಿಸಿ, ಕರುವನ್ನು ಕುಡಿಸಿ, ಆಕಳಿನಲ್ಲಿ ಹಾಲು ಕರೆದನು. ಬಳಿಕ ವಿಶ್ರಮಿಸಿಕೊಂಡ ಆ ಧೇನುವಿನಬಳಿಗೆ ಸೇವಾರ್ಥವಾಗಿ ತೆರಳಿದನು. ಮತ್ತು-ಪೂಜಾಸಾಮಗ್ರಿಗಳನ್ನೂ, ನೇಮದ ದೀಪವನ್ನೂ, ಅದರ ಹತ್ತಿರದಲ್ಲಿಟ್ಟು, ಅದು ನಿದ್ದೆಗೈದ ಬಳಿಕ, ತಾನೂ ಅಲ್ಲಿಯೇ ಪವಳಿಸಿದನು. ಬೆಳಗಾಗುತ ಬಂದಮೇಲೆ ಅದು ಎಚ್ಚರಗೊಳ್ಳಲು ತಾನೂ ಎಚ್ಚತ್ತನು.

ಬಡವರಿಗೆ ಆಸರೆಯೆನಿಸಿ, ಕೀರ್ತಿ ಸಂಪನ್ನನಾಗಿರುವ ಆ ದೊರೆಯು-ತನ್ನ ಹೆಂಡತಿಯೊಡನೆ ಮಕ್ಕಳ ಫಲಕ್ಕೋಸ್ಕರ ಆಕಳನ್ನು ಸೇವಿಸುವ ನೋಂಪಿಯನ್ನು ಕ್ರಮತಪ್ಪದೆ ಹೀಗೆ ನೇಮದಿಂದ ಆಚರಿಸುತ್ತಾ, ಇಪ್ಪತ್ತೊಂದು ದಿವಸಗಳನ್ನು ಕಳೆದನು. ಮಾರನೆಯ ದಿನವೂ ಎಂದಿನಂತೆ ಆಕಳನ್ನು ಬಿಟ್ಟುಕೊಂಡು ಕಾಡಿಗೆ ಬಂದನು. ಮುನಿಯ ಹೋಮಧೇನುವು-ತನ್ನ ಆಳುತನದಲ್ಲಿರುವ ಮಹಾರಾಜನಿಗೆ ತನ್ನಲ್ಲಿರುವ ಭಕ್ತಿಯ ಬಗೆಯನ್ನು ಪರಿಕಿಸಬೇಕೆಂದು ನೆನೆಯಿತು. ತಾನು ಹುಲ್ಲು ಮೇಯುತಲಿರುವಾಗ-ದೊರೆಯ ದಿಟ್ಟಿಯು ಮತ್ತೊಂದೆಡೆಯಲ್ಲಿ ನಟ್ಟಿರುವುದಂ ಕಂಡು, ಇದೇ ಸಮಯವೆಂದು ಭಾವಿಸಿ, ಹತ್ತಿರದಲ್ಲಿದ್ದ, ಗೌರಿಗೆ ತವರ್ಮನೆಯಾದ ಬೆಟ್ಟದ ತಪ್ಪಲಲ್ಲಿ ದೇವಗಂಗೆಯು ಹರಿಯುತಲಿದ್ದುದರಿಂದ, ಅದರ ಇಕ್ಕೆಲದಲ್ಲಿಯೂ ಹುಲ್ಲು ಬಲುಸೊಂಪಾಗಿ ಬೆಳದಿದ್ದುದಂ ಕಂಡು, ಅದರ ಪಕ್ಕದೊಳಿರುವ ಬಂದು ಗವಿಯನ್ನು ಹೊಗುತಲಿದ್ದಿತು. ಆದರೆ-ಸಿಂಗವೇ ಮೊದಲಾದ ದುಷ್ಟಮೃಗಗಳು ಮಹಾಮಹಿಮೆಯ ಮುನಿಯಾಕಳನ್ನು ತೊಂದರೆಪಡಿಸಬೇಕೆಂದು ತಮ್ಮ ಮನದೊಳಗೂ ನೆನೆಯಲಾರವು ಎಂದು ಅರಿತಿದ್ದುದರಿಂದಲೇ-ದೊರೆಯ ದೃಷ್ಟಿಯು ಆ ಬೆಟ್ಟದ ಚಲುವಿಕೆಯನ್ನು ನೋಡುವುದರಲ್ಲಿ ನೆಲೆಗೊಂಡಿದ್ದಿತು. ಆಗ - ಆತನಿಗೆ ಅರಿವಿಲ್ಲದೆಯೇ ಎಲ್ಲಿಂದಲೋ ಹಾರಿಬಂದ ಬಂದು ಸಿಂಹವು ಆ ಧೇನುವನ್ನು, ಹಾ ! ಹಿಡಿದು ಸೆಳೆಯಿತಲ್ಲಾ !! ಹಾಗಾದಕೂಡಲೆ ಆಕಳು-ಬಹು ದೀನಸ್ವರದಿಂದ ಅಮ್ಮಾ ಎಂದು ಕೂಗಿಕೊಂಡಿತು. ಒಡನೆ ಆಗವಿಯಿಂದ ಆ ಕೂಗಿನಂತೆ ಸೆಲೆಯೂ ಹೊರಟಿತು. ಆ ಸದ್ದು-ದೀನರಲ್ಲಿ ಬಲುದಯೆಯನ್ನು ತೋರುವ ದೊರೆಯ, ಬೆಟ್ಟದಲ್ಲಿ ನಟ್ಟಿದ್ದ ದಿಟ್ಟಿಯನ್ನು, ಹಗ್ಗವನ್ನೆಸೆದು ಸೆಳೆದಂತೆ ತನ್ನ ಕಡೆಗೆ ಎಳೆದು ತಿರುಗಿಸಿತು. ತತ್ ಕ್ಷಣವೇ ಬಿಲ್ಲಾಳಾದ ಅರಸು-ಹಿಂದಿರುಗಿ ನೋಡಿದನು, ಆದರೇನು ? ಇನ್ನು ಹೇಳತಕ್ಕುದೇನು ? ಪಾಟಲವರ್ಣದ ಆ ಆಕಳಿನ ಮೇಲೆ ಕೆದರಿದ ತಲೆಗೂದಲಿನಿಂದ ತುಂಬಿದ ಮೋರೆಯುಳ್ಳ ಸಿಂಹವು ಕುಳಿತಿದೆ, ಬೆಟ್ಟದ ಟೊಂಕದೊಳಗೆ ಕೆಂಗಾವಿಗಲ್ಲಿನಿಂದ ತುಂಬಿದ ನೆಲದಮೇಲೆ ಅರಳಿದ ಹೂಗಳಿಂದ ತುಂಬಿ ನಿಂತಿರುವ ಬಾಗೆಯ ಮರದಂತೆ ಕಾಣಬರುತಲಿದೆ.

ದೊರೆಯು - ಸಿಂಹದಂತೆ ಗಂಭೀರಗಮನವುಳ್ಳವನು, ಹಗೆಗಳ

ಹುಟ್ಟನ್ನಡಗಿಸಿದವನು, ಮರೆಹೊಕ್ಕವರನ್ನು ಕಾಪಾಡತಕ್ಕವನೂ ಹೌದು ಅದರಿಂದಲೆ ಸಿಟ್ಟು ಹತ್ತಿತು, ಕಣ್ಣು ಕೆಂಪಡರಿತು, ಸಿಂಹವನ್ನು ಕೊಲ್ಲತಕ್ಕುದೇ ಸರಿಯೆಂದು ಗೊತ್ತುಮಾಡಿಕೊಂಡನು. ತನಗಾದ ತಿರಸ್ಕಾರವನ್ನು ಸಹಿಸಲಾರದೆ ಹೋದ, ಹೆದೆಯನ್ನೇರಿಸಿದ ಬಿಲ್ಲಿನಲ್ಲಿ ಬಾಣವನ್ನು ತೊಟ್ಟು ಇಡಬೇಕೆಂದು ಸರಳನ್ನು ಹಿರಿದೆತ್ತಲು ಬತ್ತಳಿಕೆಗೆ ಬೆರಳನ್ನು ಹಾಕಿದನು.

ಅಹಹ! ಇದೊಂದಚ್ಚರಿ!! ಹೊಡಿಯಲಿಕ್ಕೆ ಅಣಿಯಾಗುತಲಿರುವ ಅರಸಿನ ಬಲಗೈ ಬತ್ತಳಿಕೆಯ ಬಾಣದ ಬುಡದಲ್ಲಿ ನೆಲಸಿದೆ, ಬೆರಳಿನ ಉಗುರಿನ ಕಳೆಯು ಸರಳಿನ ಗರಿಯಲ್ಲಿ ಹರಡಿದೆ, ಮುಂದೆ ಏನೊಂದು ಕೆಲಸವೂ ನಡೆಯದೆ, ಅರಸು ಅಲುಗದೆ ಸಿಂತಹಾಗೆಯೇ ನಿಂತು, ಚಿತ್ರದಲ್ಲಿ ಬರೆದ ಗೊಂಬೆಯಂತೆ ಇರುತಿದ್ದನು. ಅಯ್ಯೋ! ತೋಳು ಬಲಕ್ಕೆ ತಡೆಯುಂಟಾಯಿತು, ಅರಸಿನ ರೋಷಕ್ಕೆ ಪಾರವಿಲ್ಲದಂತಾಯಿತು, ತನ್ನ ತೇಜಸ್ಸು - ಇದಿರಿಗೆ ಅಪರಾಧಿಯಾಗಿ ನಿಂತಿರುವ ಸಿಂಹವನ್ನು ತಾಗದೆ ಹೋಯಿತು. ಆಗ ಏನಮಾಡಬಲ್ಲನು? ಮಂತ್ರದಿಂದಲೂ ಮೂಲಿಕೆಯಿಂದಲೂ ಶೌರ್ಯವನ್ನು ತಡೆದಾಗ ಮಹಾಸರ್ಪವು ಹೇಗೋ ಹಾಗೆ, ಮಹಾರಾಜನು ಹೊಟ್ಟೆಯಲ್ಲಡಗಿದ ಪೌರುಷದ ಅಥವಾ ಶೌರ್ಯದ ಇಲ್ಲವೇ ತೇಜಸ್ಸಿನ ಹೊಮ್ಮಿನಿಂದ ಕಳವಳಿಸಿ, ಕುದಿಯುತಲಿದ್ದನು. ಬಹು ದೊಡ್ಡಮನುಷ್ಯರಲ್ಲಿ ಮೊದಲನೆಯವನೆಂದು ಗಣನೆಗೆ ಬಂದಿದಾನೆ. ಮನುಕುಲಲಲಾಮನೂ ಹೌದು. ಸಿಂಹಕ್ಕಿಂತ ಅಧಿಕವಾದ ಸತ್ವವುಳ್ಳವನೆಂಬುದರಲ್ಲಿ ಸಂದೇಹವೇ ಇಲ್ಲ, ಆದರೇನು? ತನಗಾದ ಅವಸ್ಥೆಯನ್ನು ಕಂಡು ನಾಚಿಕೆಯಿಂದ ಅಚ್ಚರಿಗೊಂಡಿದಾನೆ,ಅಂತಹ ಸಮಯದಲ್ಲಿ- ಆಕಳನ್ನು ಅಡಗಿಸಿಕೊಂಡಿರುವ ಸಿಂಹವು - ವಸುಮತೀಶನಿಗೆ ವಿಸ್ಮಯವನ್ನುಂಟುಮಾಡುತ್ತಾ, ಮನುಷ್ಯರ ಮಾತಿನಿಂದ ಇಂತೆಂದಿತು—

ಎಲೈ ಮಹೀಪಾಲನೇ! ಸಾಕು, ಸಾಕು, ಇನ್ನು ಸುಮ್ಮನಿರು, ವೃಥಾ ಏಕೆ ಶ್ರಮಪಡುತ್ತೀಯೆ? ಬಲು ಬದ್ದಾಟದಿಂದ ಸೀನೊಂದು ವೇಳೆ ಬಾಣವನ್ನು ಇಟ್ಟರೂ, ಅದು ಈ ನನ್ನಲ್ಲಿ ಏನೊಂದು ಕೆಲಸವನ್ನೂ ಮಾಡಲಾರದು. ಸುಮ್ಮನೆ ತಿಬ್ಬಳಿಯಿಲ್ಲದ ಕೆಜ್ಜವಮಾಡಲುಜ್ಜುಗಿಸಬೇಡ.

ಮರವನ್ನುರುಳಿಸುವ ಮಾರುತನ ವೇಗವು- ಬೆಟ್ಟವನ್ನುರುಳಿಸುವುದರಲ್ಲಿ ಮುಂದರಿವುದುಂಟೆ? ಚೆನ್ನಾಗಿ ಯೋಚಿಸಿನೋಡು, ಮತ್ತು ನಾನಾರು ಎಂಬುದನ್ನು ಅರುಹುವೆನು ಕೇಳು:—

ಪರಮೇಶ್ವರನು- ಮೊಟ್ಟಮೊದಲು ನನ್ನ ಬೆನ್ನಿನ ಮೇಲೆ ಒಂದು ಹೆಜ್ಜೆಯನ್ನೂರಿ, ಬಳಿಕ ಕೈಲಾಸಗಿರಿಯಂತೆ ಬೆಳ್ಳಗಿರುವ ತನ್ನ ವಾಹನವಾದ ಗೂಳಿಯನ್ನು ಏರುತ್ತಾನೆ. ಈ ನನ್ನ ಬೆನ್ನು ಆತನ ಒಲುಮೆಯಿಂದ ಪವಿತ್ರವಾದುದು. ಪರಶಿವನ ಸೇವಕನಾದ ನಿಕುಂಭನಿಗೆ ನಾನು ಮಿತ್ರನು. ಹೆಸರಿನಲ್ಲಿ ನನ್ನನ್ನು ಕುಂಭೋದರ ಎಂದು ಕರೆಯುತ್ತಾರೆ. ಇದಕೋ, ಇದಿರಿಗೆ ಇತ್ತ ಕಾಣಬರುವ ದೇವದಾರು ತರುವನ್ನು ನೋಡು. ಇದನ್ನು ಶಂಕರನು ತನ್ನ ಮಗನಂತೆ ಭಾವಿಸಿಕೊಂಡಿದಾನೆ. ಕುಮಾರಸ್ವಾಮಿಯು-ತನ್ನ ತಾಯಿಯ ಹಾಲಿನ ರುಚಿಯನ್ನು ಕಂಡಿರುವ ಹಾಗೆ ಈ ದೇವದಾರುವೂ, ಗೌರಿಯು ತನ್ನ ಕರದಲ್ಲಿನ ಚಿನ್ನದ ಕೊಡದಿಂ ದೆರೆದ ಅಮೃತರಸದ ರುಚಿಯನ್ನು ಬಲ್ಲುದು. ಹಿಂದೆ ಒಂದುಸಾರಿ-ಮದವೇರಿದ ಕಾಡಾನೆಯೊಂದು ಇಲ್ಲಿಗೆ ಬಂದು, ತನ್ನ ಮೈತೀಟೆಯನ್ನು ಕಳೆದುಕೊಳ್ಳಲಿಕ್ಕೆ ಈ ಮರದ ತಾಳನ್ನು ತನ್ನ ಕೆನ್ನೆಯಿಂದ ತೀಡಿತು. ಅದರಿಂದ ಇದರ ತಿಗಡು ಮೇಲಕ್ಕೆದ್ದಿತು. ಆಗ - ಸರ್ವಮಂಗಳೆಯು - ರಕ್ಕಸರ ಬಾಣದ ಪೆಟ್ಟಿನಿಂದ ಗಾಯವಾಗಿ ಚರ್ಮವು ಸುಲಿದ ತನ್ನ ಕುಮಾರನನ್ನು ನೋಡಿದರೆ ಹೇಗೋ ಹಾಗೆ, ಈ ದೇವದಾರುವನ್ನು ನೋಡಿ ದುಃಖಿಸಿದಳು. ಇದರಲ್ಲಿ ಆಕೆಗಿರುವ ಪುತ್ರವಾತ್ಸಲ್ಯವನ್ನು ಇನ್ನು ಹೇಳತಕ್ಕುದೇನು ? ಇದನ್ನು ನೋಡಿ ಕಸಿಕರಪಟ್ಟ ಶಿವನು-ಸಿಟ್ಟುಗೊಂಡು, ಅಂದು ಮೊದಲ್ಗೊಂಡು ನನಗೆ ಸಿಂಹದ ರೂಪವನ್ನುಕೊಟ್ಟು ಇಲ್ಲಿರುವಂತ ಕಟ್ಟು ಮಾಡಿದನು. ಆತನ ನೇಮದಿಂದ ಆನೆ ಮೊದಲಾದ ಮೃಗಗಳಿಗೆ ಎಡೆಯಿಲ್ಲದಂತೆ ನಾನು ಈ ಬೆಟ್ಟದ ಗವಿಯೊಳಗೆ ವಾಸಮಾಡುತಲಿದೇನೆ. ಮಹಾದೇವನು-ಹಸಿದ ಹೊತ್ತಿಗೆ ಇಲ್ಲಿಗೆ ಬರುವ ಪ್ರಾಣಿಗಳೇ ನಿನಗೆ ಆಹಾರವೆಂದೂ ಗೊತ್ತುಮಾಡಿರುವನು. ಮುಕ್ಕಣ್ಣನ ಕಟ್ಟಲೆಯಿಂದ ಹೊತ್ತಿಗೆ ಸರಿಯಾಗಿ ನನಗೆ ಒದಗಿರುವ ಈ ಮಿಕದ ರಕುತವು ರಾಹುವಿಗೆ ಚಾಂದಿ ದನ [illegible]ದೆ. ಹಸಿವೆಗೊಂಡಿರುವ ನನ್ನ ತಣಿವಿಗೆ [illegible] ಸಾಕು. ನಿನ್ನ [illegible] ಹುರುಡು ನನ್ನಲ್ಲಿ ಬೆಳೆಗೊಳ್ಳಲರಿಯದು.

ಸೀನಿದರಿಂದ ನಾಚಿಕೆಗೊಳ್ಳಬೇಡ. ಇನ್ನು ಹಿಂತಿರುಗು. ಗುರುಧನವನ್ನು ಕಳೆದು ನಾನು ತೆರಳುವುದೆಂತು ? ಎಂದು ಚಿಂತಿಸಬೇಡ. ಇದುವರೆಗ ನಡೆಸಿದ ಉದ್ಯೋಗದಿಂದ ಮನಮುಟ್ಟಿ ಗುರುಭಕುತಿಯನ್ನು ತೋರಿದ್ದೀಯೆ. ಆದರೆ- ಕೋಲಿನ ಕಾವಲಿನಿಂದ ಕಾಪಾಡಬೇಕಾದ ವಸ್ತುವು ಸರಳಿನ ಪೆಟ್ಟಿಗೆ ಅಸದಳವೆನಿಸಿದರೆ-ಅದು, ಬಿಲ್ಲಾಳುಗಳ ಹೆಸರುವಾಸಿಗೆ ಕೊರತೆಯನ್ನುಂಟುಮಾಡದು - ಎಂದಿತು.

ಹೀಗೆ - ಚಮತ್ಕಾರವಾಗಿ ಹೇಳಿದ ಮೃಗರಾಜನ ಮಾತನ್ನು ಕೇಳಿ ಜನಾಧಿಪನು - ಓಹೋ ! ಶಿವನ ಶಕ್ತಿಯಿಂದ ನನ್ನ ಅಸ್ತ್ರ ಪ್ರಯೋಗಕ್ಕೆ ತಡೆಯುಂಟಾಯಿತಲ್ಲದೆ ನನ್ನ ಸಮಾನರಿಂದಾಗಲಿ, ಕೀಳರಿಂದಾಗಲೀ ಅಲ್ಲ - ಎಂದುಕೊಂಡು, ಹೆರರಿಂದ ತನಗಪಮಾನವಾಯ್ತೆಂಬ ಕೊರತೆಯನ್ನು ಸಡಿಲಿಸಿದನು. ಆದರೆ - ತನ್ನ ಬಾಣಪ್ರಯೋಗಕ್ಕೆ ಅಡ್ಡಿಯೆಂಬುದು ಇಂದೇ ಅಲ್ಲದೆ ಮುನ್ನಲ್ಲಿಯೂ ಇಲ್ಲ, ಪ್ರಯತ್ನವು ವಿಫಲವಾಯಿತು, ಹಿಂದೆ ಹರನಮೇಲೆ ವಜ್ರವನ್ನಿಡಲು ಹೊರಟಾಗ - ಉಗ್ರನು ಕಣ್ಣುಬಿಟ್ಟಕೂಡಲೆ, ಅಲುಗದೆ ಜಡನಾಗನಿಂತ ವಜ್ರಹಸ್ತನ ಹಾಗೆ, ತನ್ನ ತೋಳೂ ನಿಂತಿರಲು, ಸಿಂಹವನ್ನು ಕುರಿತು ಇಂತೆಂದನು:—

ಎಲೈ ಮೃಗೇಂದ್ರನೇ! ನಿನ್ನಿಂದ ನನ್ನ ಕೈಕಟ್ಟಿತು, ನಾನು ನಿನ್ನೊಡನೆ ಹೇಳಹೋಗುವ ನುಡಿಯು ಕಡುನಗೆಗೀಡಾಗುವದು ದಿಟ. ಪರಮೇಶ್ವರನ ಪರಮಾನುಗ್ರಹಕ್ಕೆ ಪಾತ್ರನಾದ ನೀನು ಪ್ರಾಣಿಗಳ ಮನೋಗತವನ್ನೆಲ್ಲ ಬಲ್ಲೆ; ಅದರಿಂದ ಹೇಳುವೆನು.—

ಯದ್ಯಪಿ - ಪ್ರಪಂಚದ ಉತ್ಪತ್ತಿ ಸ್ಥಿತಿಲಯಗಳಿಗೆ ಮೂಲಕಾರಣನಾಗಿರುವ ಮಹಾದೇವನು ಮಾನ್ಯನೇ ಹೌದು. ಆದರೆ - ಕುಲಗುರುವಿನೊಡವೆಯಾದ ಈ ಗೋಧನವು ಕಣ್ಣೆದುರಿಗೆ ಹಾಳಾಗುತ್ತಿದ್ದರೆ ಅಸಡ್ಡೆಮಾಡಿ ಬಿಡಲಿಕ್ಕೂ ಆಗುವುದಿಲ್ಲ, ಗುರುದೈವದ್ರೋಹಿಗಳ ನಡುವೆ ಸಿಲುಕಿದೇನೆ, ಅದರಿಂದ ದೇವನಾಣತಿಗೊಳಗಾಗಿರುವ ನೀನು ಈ ನನ್ನೊಡಲಿನಿಂದ ನಿನ್ನಾಹಾರವನ್ನು ನೆರವೇರಿಸಿ, ಪ್ರಸನ್ನತೆಯನ್ನು ತೋರು, ಈ ಸಂಜೆಯ ಹೊತ್ತಿನಲ್ಲಿ ತನ್ನ ಎಳೆಯ ಕಂದನನ್ನು ಕಾಣಬೇಕೆಂದು

ತವಕಿಸುತಲಿರುವ ಈ ಮುನಿಧೇನುವನ್ನು ಬಿಟ್ಟು ಕಳುಹು, ನಂಟು ರತುತುನಗಳೆರಡೂ ಉಳಿದಂತಾಗುವುದು-ಎಂದನು.

ಆ ಬಳಿಕ - ಭೂತನಾಥನಿಗೆ ಕಿಂಕರನೆನಿಸಿದ ಸಿಂಹವು - ತನ್ನ ಕೋರೆ ಹಲ್ಲಿನ ಬೆಳಕಿನಿಂದ ಗವಿಯೊಳಗಣ ಕಗ್ಗತ್ತಲನ್ನು ಕತ್ತರಿಸುವಂತೆ ಕಿರುನಗೆಯನ್ನು ತೋರುತ್ತ, ಭೂಪತಿಯಂ ಕುರಿತು ಮರಳಿ ಇಂತೆಂದಿತು. —

ಎಲೈ ಅರಸೇ! ಇದಿರಾಳಿಲ್ಲದ ನಾಡಿನೊಡೆತನ, ಹೊಸತೆನಿಸಿದ ಹರೆಯ, ಅಂದವಾದ ಒಡಲು ಇಂತೀ ಮೇಲಾದ ಮೂರನ್ನೂ ಅಲ್ಪಬೆಲೆಯ ಈ ಕೀಳೊಡವೆಗೋಸುಗ ತೊರೆಯಲೆಳಸುವ ನೀನು ನನಗೆ ಮುಂದಾಲೋಚನೆಯಿಲ್ಲದ ಎಗ್ಗನಂತೆ ಕಾಣಬರುತ್ತೀಯೆ? ಅಯ್ಯೋ ಒಂದುವೇಳೆ- ನಿನಗೆ ಭೂತದಯೆಯಿದ್ದು ಒಡಲನ್ನು ತೊರೆದರೂ, ಕಟ್ಟಕಡೆಗೆ ಈ ಆಕಳೊಂದಲ್ಲವೆ ಮೇಲುಳ್ಳುದಾಗಿರುವುದು ? ಎಲೈ ಜನರೊಡೆಯನೆ! ಹಾಗಿಲ್ಲದೆ ನೀನೊಬ್ಬನುಳಿದರೆ, ನಾಡಿನ ಪ್ರಜೆಗಳನ್ನೆಲ್ಲ ಅಡ್ಡಿವಿಡ್ಡೂರಗಳ ಎಡರಿಲ್ಲದಂತೆ ಅಡಿಗಡಿಗೂ ತಂದೆಯಹಾಗೆ ಸಲಹುತ್ತಿರುವಿಯಲ್ಲವೆ ? ಇದಕಿಂತ ಮಿಂಚಿದ ಕಜ್ಜವಿನ್ನಾವುದುಂಟು ? ಅಥವಾ-ತನ್ನದಾಗಿರುವ ಈ ಒಂದಾಕಳನ್ನು ಕಳೆದನೆಂದು ಸಿಟ್ಟುಗೊಂಬ ಅಗ್ನಿಗಣೆಯೆನಿಸಿದ ಮುನಿಸಿಗೆ ಭಯಪಡುವೆಯೊ? ಹಾಗಾದರೆ - ಕೊಡಗಳಂತೆ ತೋರವಾದ ಕೆಚ್ಚಲುಗಳನ್ನೊಳಗೊಂಡಿರುವ ಇಂತಪ್ಪ ಕೋಟಾನುಕೋಟಿ ಆಕಳುಗಳನ್ನಿತ್ತು, ಆತನ ಸಿಟ್ಟನ್ನಿಳುಹಲು ನಿನ್ನಿಂದ ಶಕ್ಯವಾಗುವುದು. ಅದರಿಂದ ಸೊಗಸಂತಸಗಳ ಸಾಲುಗಳನ್ನು ಅನುಭವಿಸತಕ್ಕದಾಗಿ ಬೆಳಗುತಲಿರುವ ನಿನ್ನ ದೇಹವನ್ನು ಸಂರಕ್ಷಿಸಿಕೊಂಬುದು ಉತ್ತಮ. ಒಂದುವೇಳೆ-ಆತ್ಮರಕ್ಷಣೆಗಾಗಿ ಗೋವನ್ನುಪೇಕ್ಷಮಾಡಿದರೆ ಪರಲೋಕ ಹಾನಿಯುಂಟಾಗುವುದೆಂದು ನೀನು ಬಗೆವುದಾದರೆ, ನೆಲದ ಸೋಂಕಿನಿಂದ ಮಾತ್ರವೇ ಬೇರೆನಿಸಿಕೊಂಡಿರುವ ನಿನ್ನಯ ಸಾಮ್ರಾಜ್ಯವು-ಇಂದ್ರಪದವಿಗಿಂತ ಕೀಳಾದುದಲ್ಲವೆಂದು ಬಲ್ಲವರೆಲ್ಲ ಹೇಳುತ್ತಾರೆ. ಎಂದಿಷ್ಟು ಸಂಗತಿಯನ್ನ ಹೇಳಿ ಮೃಗಾಧಿಪನು ಸುಮ್ಮನಾಗುತ್ತಿರಲು, ಗವಿಯಿಂದ ಹೊರಟ ಸೆಲೆಯಿಂದ ಪಕ್ಕದೊಳಿರುವ ಪರ್ವತವೂ ಅಕ್ಕರೆಯಿಂದ ಭೂಪಾಲನನ್ನು ಕುರಿತು ಅದೇ ಅರ್ಥವನ್ನೇ ಹೇಳುವಂತಿದ್ದಿತು.

ಕೇಸರಿಯ ಆಕ್ರಮಣದಿಂದ ಆಕಳು ಕಾತರಿಸಿ, ಮಿಣಿಮಿಣಿನೆ ಬಿಡುತಲಿರುವ ಕಣ್ಣುಗಳಿಂದ ನೋಡುತಲಿದೆ. ಅದನ್ನು ನೋಡುತಲಿರುವ ಅರಸಿಗೆ ಕನಿಕರವು ಉಕ್ಕುಳಿಸುತಲಿದೆ. ಆ ಮನುಜದೇವನು-ಮಹಾದೇವ ನನುಚರನಾದ ಹರಿಯ ಮಾತನ್ನು ಕೇಳಿ ಮುಗುಳಿಂತೆಂದನು. —

ಎಲೈ ಪಂಚಾನನನೇ! 'ಮರೆಹೊಕ್ಕವರನ್ನು ಗಾಯಪಡದಂತೆ ಕಾಪಿಡುವವನು' ಎಂಬರ್ಥದಿಂದಲ್ಲವೆ ಲೋಕದಲ್ಲಿ ಉದಾರವಾದ ಕ್ಷತ್ರಶಬ್ದವು ಬಳಕೆಗೆ ಬಂದಿದೆ? ಅದಕೆ ತಲೆಕೆಳಗಾದ ನಡತೆಯುಳ್ಳರುವ ನನಗೆ ಸಾಮ್ರಾಜ್ಯದಿಂದಾಗಲಿ, ಅಪಹಾಸೆಗೊಳಗಾಗಿ ಮಲಿನಗಳೆನಿಸಿದ ಹರಣಗಳಿಂದಾಗಲಿ ಉಪಯೋಗವೇನು? ಜಾತಿಧರ್ಮವನ್ನು ತೊರೆವು ದಕ್ಕಿಂತಲೂ ಜೀವನವನ್ನು ತೊರೆವುದೇ ಮೇಲಲ್ಲವೆ? ಬೇರೆ ಗೋವುಗ ಳನ್ನು ಕೊಟ್ಟು, ಮಹಾಮುನಿಯ ಮುನಿಸನ್ನು ಇಳಿಸೋಣವೆಂದರೆ ಸರ್ವಥಾ ಸಾಧ್ಯವಲ್ಲ. ಈ ಆಕಳು ಸಾಧಾರಣವಾದ ಆಕಳಲ್ಲ. ಕಾಮ ಧೇನುವಿಗಿಂತ ಕಿಂಚಿತ್ತಾದರೂ ಕಡಮೆಯೆನಿಸಿದುದಲ್ಲವೆಂದು ತಿಳಿ. ಮಹೇಶ್ವರನ ಮಹಿಮೆಯಿಂದಲೇ ಇದರಲ್ಲಿ ನಿನ್ನ ಪೆಟ್ಟು ಬಿದ್ದುದು, ಈ ಪಯಸ್ವಿನಿಗೆ ಪ್ರತಿಯಾಗಿ ನನ್ನ ದೇಹವನ್ನು ನಿನಗೆ ಒಪ್ಪಿಸಿ, ನಿನ್ನಿಂದ ಇದನ್ನು ಬಿಡಿಸತಕ್ಕುದೇ ಸರಿ. ಹಾಗಾದರೆ ನಿನ್ನ ಆರೋಗಣೆಗೂ ಕೊರತೆಯುಂಟಾಗುವುದಿಲ್ಲ. ಮಹರ್ಷಿಯ ಹೋಮವೇ ಮೊದಲಾದ ಸತ್ಕರ್ಮಕ್ಕೂ ನ್ಯೂನತೆಯುಂಟಾಗದು. ನಾನು ದ್ರೋಹಿಯಾಗುವುದೂ ಇಲ್ಲ. ಸ್ವಾಮಿಭಕ್ತಿಯುಳ್ಳ ನಿನಗೂ ಈ ವಿಷಯವು ಚೆನ್ನಾಗಿ ಗೊತ್ತಿದೆ. ಅದರಿಂದಲೇ ಈ ದೇವದಾರು ತರುವನ್ನು ಪೊರೆವುದರಲ್ಲಿ ಪರಿಪೂರ್ಣವಾದ ಪ್ರಯತ್ನವುಳ್ಳವನಾಗಿದ್ದೀಯೆ. ಕಾವಲುಗಾರನು ಗಾಯಪಡದೆ, ಸಂ ರಕ್ಷಿಸುತಕ್ಕುದಾದ ಸ್ವತ್ತನ್ನು ನಾಶಗೊಳಿಸಿ, ಬರಿಗಯ್ಯಿಂದ ಸ್ವಾಮಿಯ ಇದಿರಿಗೆ ಹೋಗಿ ನಿಲ್ಲುವುದು ಶಕ್ಯವಲ್ಲ. ತೊಂದರೆಯನ್ನುಂಟುಮಾಡದೆ ನನ್ನನ್ನು ಉಳುಹಬೇಕೆಂದು ನಿನಗೆ ಕನಿಕರವಿದ್ದುದೇ ಆದರೆ, ನನ್ನ ಕೀರ್ತಿದೇಹವನ್ನು ನಿಲ್ಲಿಸುವುದರಲ್ಲಿ ನಿನ್ನ ದಯಾಳುತೆಯನ್ನು ತೋರು. "ಪಾಂಚಭೌತಿಕ ಶರೀರಗಳು ನಾಶವನ್ನು ಪಡೆಯತಕ್ಕುವು" ಎಂಬುದು ಸಿದ್ಧವಾಗಿರುವಲ್ಲಿ, ನನ್ನಂಥವರಿಗೆ ಅವುಗಳೊಳಗೆ ದಿಟವಾಗಿ ಎಂದಿಗೂ ಆದರವುಂಟಾಗುವುದಿಲ್ಲ.

ಇದರಮೇಲೆ ಇನ್ನೊಂದು ವಿಶೇಷವುಂಟು-ಬಲ್ಲವರು ಅನ್ಯೋನ್ಯ ಸಲ್ಲಾಪದಿಂದ ಗೆಳೆತನವು ಮೊಳೆಯುವುದೆಂದು ಹೇಳುವರು. ಈ ಹಳು ವದೊಳು ಕಲೆತ ನಮ್ಮಿಬ್ಬರಿಗೂ ಅದು ನೆರವೇರಿದೆ. ಆದಕಾರಣ ಪಶು ಪತಿಯ ಅನುಚರನಾದ ನೀನು ಜತನಾಡಿಯಾದ ನನ್ನ ಬಯಕೆಯನ್ನು ಭಂಗಪಡಿಸಬಾರದು. ಎಂದು ಹೇಳಿ ವಿರಮಿಸಿದನು.

ಇಂತೆಂದ ದಿಲೀಪನ ನುಡಿಯನ್ನಾಲಿಸಿ, ಕೇಸರಿಯು-ಅವನ ಮನದ ಣಿಕೆಯಂತೆ ನಡೆಯಿಸಲು ಹಾಗೆಯೇ ಆಗಲೆಂದು ಮಾತುಕೊಟ್ಟಿತು. ಕೂಡಲೆ ಕ್ಷಿತಿಪತಿಯ ಕೈಕಟ್ಟು ಬಿಟ್ಟಿತು. ಭೂಪತಿಯು ಬಾಣ ಬತ್ತ ಳಿಕೆಗಳನ್ನೊಂದೆಡೆಯೊಳು ತೆಗೆದಿಟ್ಟು, ದೇಹಾಭಿಮಾನವನ್ನು ಬಿಟ್ಟು, ಆ ಹರಿಯ ಇದಿರಿಗೆ ತನ್ನ ದೇಹವನ್ನು ಅಡಗಿನುಂಡೆಯಂತೆ ಒಪ್ಪಿಸಲು ಹತ್ತಿರಕ್ಕೆ ಬಂದನು. ಮತ್ತು- ಶಿರಬಾಗಿ ನೆಲವೊಗನಾಗಿ ಮಲಗಿದನು. ಈಗಾಗ ಹರಿಯು ತನ್ನಮೇಲೆ ತೀವ್ರವಾಗಿ ಕುಪ್ಪಳಿಸಿ ಬೀಳುವುದೆಂದು ಇದಿರುನೋಡುತಲಿದ್ದನು. ಆಗ-ಮುಗಿಲಿನಲ್ಲಿ ನಿಂತ ದೇವರ್ಕಳು ತಮ್ಮ ಕರದಿಂದ ನರಪತಿಯಮೇಲೆ ಪೂಮಳೆಗರೆದರು.

ಆ ಬಳಿಕ - ಸೊದೆಯಂತೆ ಸೊಗಯಿಸುತಲಿರುವ 'ಎನ್ನ ಮುದ್ದು ಕಂದನೇ ಮೇಲಕೇಳು' ಎಂದು ಕೇಳಬಂದ ನುಡಿಯನ್ನು ಕೇಳಿದ ನರಪತಿಯು-ಎದ್ದು ನಿಂತು, ತನ್ನನ್ನು ಹಡದ ತಾಯಿಯಂತೆ ಇದಿರಿಗೆನಿಂತು ಹಾಲನ್ನು ಬಿಟ್ಟಿಡಿಸುತಲಿರುವ ಪಯಸ್ವಿನಿಯನ್ನು ಮಾತ್ರ ಕಂಡನಲ್ಲದೆ ಸಿಂಹವನ್ನು ಕಾಣಲೇ ಇಲ್ಲ. ಮುಂದೋರದೆ ಅಚ್ಚರಿಗೊಂಡು ಅಲು ಗದೆ ನಿಂತನು. ಆಗಲಾ ಮುನಿಧೇನುವು - ಎಲೈ ಸಾಧುವೇ ! ನಿನ್ನ ಬಕುತಿಯ ನೆಲೆಯನ್ನರಿಯಲು ಇದೊಂದು ಇಂದ್ರಜಾಲವನ್ನು ಕಲ್ಪಿಸಿ ಪರಿಕಿಸಿದೆನು. ಮುನಿಯ ವೈಮೆಯಿಂದ ಮೃತ್ಯುವೂ ನನ್ನನ್ನು ಇರಿ ಯಲಾರನು. ಇನ್ನುಳಿದ ಕೂರಮಿಕಗಳು ಇದಿರಿಸ ಬಲ್ಲುವೆ ! ಎಲೈ ಕಂದನೇ! ನೀನು ನಿನ್ನ ಕುಲಗುರುವಿನಲ್ಲಿ ತೋರಿದ ಭಕ್ತಿಯಿಂದಲೂ, ನನ್ನಲ್ಲಿ ತೋರಿದ ಕನಿಕರದಿಂದಲೂ ಮನವಾರ ಮೆಚ್ಚಿರುವೆನು, ನಿನಗೆ ಬೇಕಾದ ವರವನ್ನು ಕೇಳು. ಹಾಲನ್ನು ಮಾತ್ರ ಕರೆವ ಪಶುವನ್ನಾಗಿ ನನ್ನನ್ನು ನೆನೆಯಬೇಡ. ಪ್ರಸನ್ನಳಾದರೆ, ಕೋರಿದ ಕೋರಿಕೆಗಳನ್ನೆಲ್ಲ ಕರೆವಕಾಮಧೇನು ಎಂದು ತಿಳಿ - ಎಂದಿತು.

ತರುವಾಯ-ಬೇಡುವವರ ಮನವನ್ನು ತಣಿಸುವವನೆನಿಸಿ, ತೋಳು ಬಲದಿಂದ ಮಹಾ ವೀರನೆಂಬ ಹೆಸರುವಾಸಿಯನ್ನು ಗಳಿಸಿರುವ ತಿರೆಯಾಣ್ಮನು-ಕರಗಳನ್ನು ಜೋಡಿಸಿ ನಿಂತು, ಎಲೌ ತಾಯೇ ! ಕುಲದೇಳಗೆಗೆ ಣಿಯಾಗುತ, ಅಪಾರಕೀರ್ತಿ ಸಂಪನ್ನನಾಗಿ ಬಾಳುವ ಕುವರನನ್ನು ಸುದಕ್ಷಿಣೆಯಲ್ಲಿ ಕರುಣಿಸಬೇಕು ಎಂದು ಕೇಳಿಕೊಂಡನು.

ಆಮೇಲೆ ಆ ಪಯಸ್ವಿನಿಯು - ಪುತ್ರಕಾಮನಾಗಿರುವ ಪೃಥ್ವೀಪತಿಗೆ ಹಾಗೆಯೇ ಆಗಲೆಂದು ವರವಂ ಕರುಣಿಸಿದುದಲ್ಲದೆ, ಪುತ್ರವಾತ್ಸಲ್ಯದಿಂದ ಎಲೈ ಪುತ್ರನೇ! ಪತ್ರಪಟದಲ್ಲೆನ್ನ ಪಾಲಂಕರೆದು ಪಾನ ಮಾಡು, ಎಂದಾಣತಿಯನಿತ್ತುದು.

ಆಗಲಾ ಅರಸು - ಎಲೌ ಮಾತೆಯೇ ! ಕರುವನ್ನು ಕುಡಿಸಿ, ನಿನ್ನ ಹಾಲನ್ನು ಕರೆದು, ಮುನಿಯ ಹೋಮಕ್ಕೆ ವಿನಿಯೋಗಿಸಿ, ಉಳಿದ ಪ್ರಸಾದವನ್ನು, ನನ್ನಿಂದ ಆಳಲ್ಪಡುವ ಭೂಮಿಯ ಹುಟ್ಟುವಳಿಯಲ್ಲಿನ ಆರನೆಯ ಒಂದು ಭಾಗವನ್ನು ಹೇಗೋಹಾಗೆ, ಮಹರ್ಷಿಯ ಆಣತಿಯನ್ನು ಪಡೆದು ಅನುಭವಿಸಬೇಕೆಂದು ಬಯಸುತ್ತೇನೆ ; ಎಂದು ವಿಜ್ಞಾಪಿಸಲು, ವಶಿಷ್ಠಧೇನುವು ವಿಶೇಷವಾಗಿ ಪ್ರೀತಿಸಿತು; ಮತ್ತು - ಆ ದೊರೆಯಿಂದೊಡಗೂಡಿ ಹಿಮಶೈಲದ ತಡಿಯಿಂದ ಆಶ್ರಮದ ಕಡೆಗೆ ತಿರುಗಿತು.

ತಪೋವನವನ್ನು ಸೇರಿದ ಬಳಿಕ - ನಗೆಮೊಗದ ಜನದೊಡೆಯನು ತನ್ನ ಸಂತಸದ ಕುರುಹುಗಳಿಂದ ನಂದಿನಿಯ ಅನುಗ್ರಹವನ್ನು ಮೊದಲೇ ಊಹಿಸಿ ತಿಳಿದಿದ್ದರೂ, ಪುನರುಕ್ತಿಯಂತಿರುವ ತನ್ನಮಾತಿನಿಂದ ಮುನಿಗೆ ಬಿನ್ನವಿಸಿ, ತರುವಾಯ ಪ್ರಿಯಳಿಗೂ ತಿಳಿಸಿ, ಆಮೇಲೆ - ದೋಷಲೇಶವಿಲ್ಲದೆ ಸಾಧುಪ್ರಿಯನೆನಿಸಿದಾಪಾರ್ಥಿವನು ಕರುವಿಗೂ, ಮುನಿಯ ಹೋಮಕ್ಕೂ ಉಪಯೋಗಿಸಿ ಉಳಿದ, ತನ್ನ ಪರಿಶುದ್ಧವಾದ ಕೀರ್ತಿಯಂತಿರುವ ಧೇನುವಿನ ಕ್ಷೀರವನ್ನು ವಶಿಷ್ಠಮುನಿಯ ಅಪ್ಪಣೆಯಿಂದ ಅತ್ಯಾಶೆಗೊಂಡು ಪಾನಮಾಡಿದನು.

ಹೀಗೆ ನೇಮದಿಂದ ಇಪ್ಪತ್ತೆರಡನೆಯ ದಿವಸಕ್ಕೆ ವ್ರತವು ಪೂರೈಯಿಸಿತು. ಇಪ್ಪತ್ತುಮೂರನೆಯ ದಿನ ಬೆಳಗಾದಕೂಡಲೆ - ವ್ರತಸಾಂಗತೆಯ ಪಾರಣೆಯಾಯಿತು. ಪತ್ನಿಯೊಡನೆ ದಿಲೀಪನು ಪುರಪ್ರಯಾಣಕ್ಕೆ

ಅಣಿಯಾದನು, ಜಿತೇಂದ್ರಿಯನಾದ ವಶಿಷ್ಠಮುನಿಯು ಆ ದಂಪತಿಗಳಿಗೆ, ಹೊರಡುವಾಗ ಮಂಗಳಾಶಾಸನವನ್ನು ಮಾಡಿ, ಸುಖ ಪ್ರಯಾಣವನ್ನು ಮಾಡಿಸಿದನು.

ತದನಂತರದಲ್ಲಿ ಮಂಗಳಕಾರ್ಯದ ಮಹಾಮಹಿಮೆಯ ದಿಲೀಪ ಮಹಾರಾಜನು - ಧರ್ಮಪತ್ನಿಯೊಡನೆ ಹವಿಸ್ಸಿನಿಂದ ಬೆಳಗುತಲಿರುವ ಅಗ್ನಿಯನ್ನೂ, ಕುಲಗುರುವನ್ನೂ, ಗುರುಪತ್ನಿಯನ್ನೂ, ಕರುವಿನೊಡನೆ ಸಹಿತವಾದ ನಂದಿನಿಯನ್ನೂ ಕ್ರಮವಾಗಿ ಬಲವಂದು, ಪ್ರಯಾಣಾಭಿಮುಖನಾಗಿ ರಥವನ್ನೇರಿದನು. ತಡೆಯಿಲ್ಲದೆ ಕೈಗೂಡಿದ ಕೋರಿಕೆಯಂತೆ, ಹಳ್ಳದಿಣ್ಣೆಗಳಿಲ್ಲದೆ ಸಮನಾದ ಹಾದಿಯಲ್ಲಿ, ಕಿವಿಗಿಂಪಾಗಿ ದನಿಗೆಯ್ಯುತ ನಡೆಯುವ ತೇರು ಹಾಯಾಗಿದ್ದಿತು, ಇಂತು ಸಪತ್ನೀಕನಾಗಿ ತಾಳ್ಮೆಯಿಂದ ಹೊರಟು, ದಾರಿಯನ್ನು ದಾಟಿ, ತನ್ನ ಪುರದ ಬಳಿಗೈತಂದನು. ಪ್ರಜೆಗಳಿಗೆ ಧರ್ಮದರ್ಶಕನಾಗ, ಪ್ರೀತಿಯಿಂದ ಅವರನ್ನು ಪಾಲಿಸುತ್ತಾ ಅವರ ಪೂರ್ಣಾನುರಾಗಕ್ಕೆ ಪಾತ್ರನೆನಿಸಿ, ಸರ್ವಸಮ್ಮತನಾಗಿದ್ದುದರಿಂದಲೇ ಆತನ ಅಗಲಿಕೆಯನ್ನು ತಾಳಲಾರದೆ ತಹತಹಪಡುತಲಿದ್ದ ಪ್ರಜೆಗಳೆಲ್ಲರೂ, ಪ್ರಜಾಕಾಮನಾಗಿ, ವ್ರತವನ್ನಾಚರಿಸಿ, ಬಹು ಕೃಶನಾಗಿದ್ದರೂ ವರಲಾಭದಿಂದ ಪೊಸತೆನಿಸಿದ ಕಳೆಯನ್ನು ಹೊಂದಿರುವ ಪ್ರಜಾನಾಥನನ್ನು, ಹೊಸದಾಗಿ ಉದಿಸಿದ ಚಂದಿರನನ್ನು ಹೇಗೋ ಹಾಗೆ ಎಷ್ಟು ಸಾರಿ ನೋಡಿದರೂ ತಣಿಯಲೇ ಇಲ್ಲ.

ವಿಬುಧೇಶನ ವೈಭವವುಳ್ಳ ವಸುಮತೀಶನು ಬಂದನೆಂಬ ಸುದ್ದಿಯು ಪುರದೊಳೆಲ್ಲ ಹರಡಿತು. ಪುರಜನರು ತೋರಣ ಧ್ವಜಸ್ತಂಭಾದಿಗಳಿಂದ ಪ್ರೀತಿಪೂರ್ವಕವಾಗಿ ಪಟ್ಟಣವನ್ನು ಅಲಂಕರಿಸಿ, ಮಹಾರಾಜನನ್ನು ಇದಿರ್ಗೊಂಡು ತಂತಮ್ಮ ಸಂತೋಷವನ್ನು ತೋರ್ಪಡಿಸುತ ಅಭಿನಂದಿಸಿದರು. ದೊರೆಯು- ಅವರ ಆನಂದವನ್ನು ಆದರಪೂರ್ವಕವಾಗಿ ಪರಿಗ್ರಹಿಸುತ್ತಾ, ಪುರಪ್ರವೇಶಮಂಗೈದು ಆದಿಶೇಷನಿಗೆಣೆಯೆನಿಸಿದ ತನ್ನ ಬಾಹುವಿನಲ್ಲಿ ಎಂದಿನಂತೆ ರಾಜ್ಯಭಾರವನ್ನು ವಹಿಸಿದನು.

ಇಂತು ಧರ್ಮದಿಂದ ಕೆಲಕಾಲ ರಾಜ್ಯವನಾಳುತ್ತಿರಲು, ಮಹಾತ್ಮರ ಅನುಗ್ರಹವು ವಿಫಲವಾಗುವುದುಂಟೆ? ಅತ್ರಿಮುನಿಯ ನೇತ್ರದಿಂದ ಜನಿಸಿದ ಜಲವನ್ನು ದಿಗಂಗನೆಯರು ಧರಿಸಿದ್ದು, ಅವರಿಂದ ಆವಿರ್ಭವಿಸಿ,

ಲೋಕಾನಂದವೆನಿಸಿರುವ ಚಂದ್ರರೂಪವಾದ ತೇಜಸ್ಸನ್ನು, ಆಕಾಶದಂತೆಯೂ, ಅಗ್ನಿಯು ಕೊಟ್ಟ ಶಿವನ ತೇಜವನ್ನು ದೇವಗಂಗೆಯುಹಾಗೂ, ದಿಲೀಪನ ಧರ್ಮಪತ್ನಿಯು ರಘುಕುಲದೇಳಿಗಗಾಗಿ ಅಷ್ಟದಿಕ್ಪಾಲಕರ ಅಂಶದಿಂದೊಡಗೂಡಿದ ಗರ್ಭವನ್ನು ಧರಿಸಿದಳು.

— ಇಂತು ನಂದಿನೀ ವರಪ್ರಸಾದವೆಂಬ ದ್ವಿತೀಯಾಧ್ಯಾಯಂ —

ಶ್ರೀಃ.

## ತೃತೀಯಾಧ್ಯಾಯಂ.

ಸೂಚನೆ॥ ರಘುವೆನಿ ಪಾತ್ಮಜ ನಿಂದಂ ॥
ಮಘವಂತನ ಜೈಸಿ ಯಶ್ವ ಮೇಧವ ಗೈದಂ ॥
ಲಘು ಭವಜಲಧಿಯ ದಾಂಟಲ್ ।
ರಘು ವಶವಂ ಗೈದ ನಾ ದಿಲೀಪಂ ಧುರವಂ ॥

ಸುದಕ್ಷಿಣೆಯ ಗರ್ಭಧಾರಣವು ದಿಲೀಪನಿಗೆ ಬಹಳ ಇಷ್ಟವಾಗಿದ್ದಿತು, ಭಾವಿ ಶ್ರೇಯವನ್ನು ಸೂಚಿಸುತಲಿತ್ತು, ಗೆಳತಿಯರ ಮೇಲ್ತರದ ನೋಟಕ್ಕೆ ಬೆಳ್ತಿಂಗಳನಂತೆ ಬೆಳಗುತಲಿದ್ದಿತು. ಇಕ್ಷ್ವಾಕುರಾಜನ ಕುಲದೇಳಿಗೆಗೆ ಮೂಲವಾಯಿತು. ಬಳಿಕ ಗರ್ಭದ ಕುರುಹುಗಳು ಕಾಣುತ ಬಂದುವು - ಒಡತಿಯ ಒಡಲು ಬಡವಾಗುತ ಬಂದಿತು. ಅರಸಿತಿಯು ತೊಡವುಗಳನ್ನೆಲ್ಲ ತೊಡಲು ಶಕ್ತಳಾಗದಿದ್ದಳು, ಬಾಗೆಯ ಹೂವಿನಂತೆ ಮೋರೆಯು ಬಿಳುಪೇರಿತು. ಇದರಿಂದ ಬೆಳಕು ಹರಿಯುತ ಬಂದು ವಿರಳವಾದ ತಾರೆಗಳನೊಳಗೊಂಡಿರುವ ತನುಕಾಂತಿಯು ಚಂದಿರಸಿಂದ ಸಹಿತವಾದ ಮುಂಜಾನಯ ಇರುಳಿನಂತೆ ಕಾಣಬರುತ್ತಿದ್ದಳು, ಗರ್ಭದ ಬಯಕೆಯಿಂದ ಸುದಕ್ಷಿಣೆಯೊಂದುಬಾರಿ ಕೆಮ್ಮಣ್ಣನ್ನು ತಿಂದಿದ್ದಳು. ಅರಸು - ಒಂದು ದಿನ ಏಕಾಂತದಲ್ಲಿ ಆಕೆಯ ಮುಖವನ್ನು

ಆಘ್ರಾಣಿಸಿದನು, ಬಹು ಹಿತವಾಗಿದ್ದಿತು, ಬಿಸಿಲಿನ ಬೇಗೆಯಿಂದ ಬತ್ತಿದ ಕಾಡುಕೊಳದೊಳಗಣ ಬಿರಿದ ನೆಲವನ್ನು, ಮುಂಗಾರು ಹನಿಗಳು ಬೀಳುತಲಿರುವಾಗ್ಗೆ ಆಘ್ರಾಣಿಸುವ ಆನೆಯಂತೆ, ತಿರೆಯಪ್ಪನೂ ತಣಿಯಲೇ ಇಲ್ಲ. ಎಣ್ದೆಸೆಯೊಳದಿರಾಳ್ವಲ್ಲಣ ಚಕ್ರವರ್ತಿಯಾಗುವ ತನ್ನ ಸುತನು-ದೇವಲೋಕವನ್ನು ದೇವೇಂದ್ರನು ಹೇಗೋ ಹಾಗೆ, ಈ ಭೂಲೋಕವನ್ನು ಭುಜಿಸುವನು ಎಂದು ತಿಳಿದೇ, ರಸವತ್ತರಗಳಾದ ಭೋಗ್ಯವಸ್ತುಗಳು ಬಹಳವಾಗಿದ್ದರೂ, ಅವುಗಳನ್ನೆಲ್ಲ ತೊರೆದು, ಮಹಾರಾಣಿಯು-ಮೊಟ್ಟಮೊದಲು ಅಂತು ಇನಿದೆನಿಸಿದ ಮಣ್ಣನ್ನು ತಿನ್ನಲು ಮನವಿಟ್ಟಳು. ಹೀಗಿರಲೊಮ್ಮೆ ಕೋಸಲೇಶನು—“ಮಗಧರಾಜನಂದನೆಯಾದ ಎನ್ನ ಮನದನ್ನೆಯು ನಾಚಿಕೆಗೊಂಡು ತನ್ನ ಮನದ ಬಯಕೆಯನ್ನು ನನ್ನೊಂದಿಗೆ ತುಸವಾದರು ತಿಳಿಸದಿರುವಳು. ಆವುದನ್ನು ಬಯಸುವಳೆಂಬುದನ್ನು ನೀವಾದರು ತಿಳಿದು ಹೇಳಿ” ಎಂದು ಸುದಕ್ಷಿಣೆಯ ಗೆಳತಿಯರನ್ನು ಆದರದಿಂದ ಅಡಿಗಡಿಗೂ ಬೆಸಗೊಳ್ಳುತಲಿದ್ದನು. ಮಾಗಧಿಯು - ಬಯಕೆಯ ಹೊಯಿಲನ್ನು ತಾಳಲಾರದೆ, ಆವಾವುದನು ಬಯಸುತ ಬಂದಳೋ, ಆ ಕೂಡಲೆ ತಂದು ಇದಿರೊಳಣಿಮಾಡುತಲಿರುವ ಆಯಾಯ ವಸ್ತುವನ್ನೂ ನೋಡುತ ಬಂದಳು. ಹೆದೆಯನೇರಿಸಿದ ಬಿಲ್ಲನ್ನು ಹಿಡಿದು ಹೊರಡುವ ಆ ದೊರೆಗೆ ಇಷ್ಟವಾದುದು ದೇವಲೋಕದಲ್ಲಿಯೂ ಅಸದಳವೆನಿಸುತಲಿರಲಿಲ್ಲ. ಕಾಲಕ್ರಮದಿಂದ ಬಯಕೆಯು ಬಲ್ಮೆಯು ಕಡಮೆಯಾಗುತ ಬಂದಿತು, ಅವಯವಗಳು ಹೊರವಾಗುತ್ತ ಬಂದುವು. ಆಗ ಅರಸಿತಿಯು-ಹಣ್ಣೆಲೆಗಳುದಿರುತ ಬರುವಲ್ಲಿ, ಪೊಸತೆನಿಸಿ ಹೊಮ್ಮುವ ತಳಿರುಗಳಿಂದ ತುಂಬಿದ ಎಳೆಯ ಬಳ್ಳಿಯಂತೆ ರಾರಾಜಿಸುತಲಿದ್ದಳು.

ಆಗಲಾ ಧೀರನಾದ ದೊರೆಯು - ಇನ್ನು ಸ್ವಲ್ಪಕಾಲ ಕಳೆಯಲು, ನಿಧಿಗರ್ಭವಾದ ವಸುಮತಿಯಹಾಗೂ, ಅಂತರದೊಳಗ್ನಿಯನ್ನೊಳಗೊಂಡಿರುವ ಶಮಿಯಹಾಗೂ, ಗುಪ್ತಸಲಿಲವಾದ ಸರಸ್ವತೀ ಸರಿತ್ತಿನಹಾಗೂ, ಗರ್ಭಿಣಿಯಾದ ತನ್ನ ಗೃಹಿಣಿಯನ್ನು ಸಂಭಾವಿಸಿದನು. ಅದುವರೆಗೆ ಬದಗಿದ ಪುಂಸವನವೇ ಮೊದಲಾದ ಉತ್ಸವಗಳನ್ನು ತನ್ನ ಪ್ರಿಯಳಲ್ಲಿರುವ ಪ್ರೇಮಕ್ಕೂ, ಮನಸ್ಸಿದ ಉತ್ಸಾಹಕ್ಕೂ, ತೋಳುಬಲದಿಂದ ದಿಗಂತರಗಳಲ್ಲಿ ಗಳಿಸಿದ ಸಂಪದಗಳಿಗೂ, ತನ್ನ ಉದಾರ ಭಾವಕ್ಕೂ,

ತಕ್ಕಂತೆ ಕ್ರಮವಾಗಿ ನೆರವೇರಿಸಿದನು. ಅರಸಿತಿಯು ಪೂರ್ಣಗರ್ಭಿಣಿಯಾದಳು, ಅಷ್ಟದಿಕ್ಪಾಲಕರ ಅಂಶಗಳ ಮೊತ್ತವೇ ಆಕೆಯ ಗರ್ಭದಲ್ಲಿನ ಶಿಶುವಾಗಿದ್ದಿತು. ಒಂದಾನೊಂದು ದಿವಸ ರಾಜನು ರಾಣಿವಾಸಕ್ಕೆ ಬರುತ್ತಿದ್ದನು. ಅರಸಿಯು ಇನನಿದಿರ್ಗೊಂಡು ಅಂಜಲಿಯನ್ನು ಜೋಡಿಸಿ, ಮರ್ಯಾದೆಯನ್ನು ಪಾಲಿಸಬೇಕೆಂದು, ಗರ್ಭಭಾರದಿಂದ ಪೀಠವಂ ಬಿಟ್ಟೇಳುವ ಸಡಗರದಲ್ಲಿ ಬಳಲುತ ಚಂಚಲಾಕ್ಷಿಯಾದಳು, ಆ ಮಡದಿಯನ್ನು ಮಹಾರಾಜನು ನೋಡಿ, ಆನಂದಭರಿತನಾದನು. ಬಾಲಚಿಕಿತ್ಸೆಗಳನ್ನು ಬಲ್ಲ ಜಾಣರಾದ ಭಿಷಗ್ವರರು ಗರ್ಭವು ಸುಖವಾಗಿ ಬೆಳೆಯುವಂತೆ ಚಿಕಿತ್ಸೆಗಳನ್ನಾಚರಿಸಿದರು, ಅರಸತಿಯು ಪ್ರಸವಾಭಿಮುಖಿಯಾಗುತಲಿದ್ದಳು, ಆಗಲಾ ಭೂಮಿಪಾಲನು ಮಳೆಗಾಲದ ಮೋಡಗಳನ್ನೊಳಗೊಂಡ ಮುಗಿಲಿನಂತಿರುವ ಮಹಿಷಿಯನ್ನು ನೋಡಿ ಹರ್ಷಗೊಂಡನು.

ಇನ್ನೇನು! ಹತ್ತನೆಯ ತಿಂಗಳು ಬಂದಿತು, ಸೂರ್ಯನೇ ಮೊದಲಾದ ಐದು ಗ್ರಹಗಳೂ ಅಸ್ತಮಯವನ್ನು ಪಡೆಯದೆ, ತಂತಮ್ಮ ಉಚ್ಚಸ್ಥಾನಗಳಲ್ಲಿದ್ದು, ಭೂಪಾಲಪುತ್ರನ ಭಾಗ್ಯಸಂಪದವನ್ನು ಸೂಚಿಸುತಲಿದ್ದುವು, ಶಚೀದೇವಿಗೆಣೆಯಾದ ಸುದಕ್ಷಿಣೆಯು ಪ್ರಭಾವಮಂತ್ರೋತ್ಸಾಹಗಳೆಂಬ ಸಾಧನಗಳನ್ನೊಳಗೊಂಡಿರುವ ಶಕ್ತಿಯು ಅಪಾರವಾದ ಅರ್ಥವನ್ನು ಹೇಗೋ ಹಾಗೆ, ಶುಭಸಮಯದಲ್ಲಿ ಸುಕುಮಾರನನ್ನು ಹಡೆದಳು. ದೆಸೆಗಳು ನಿರ್ಮಲಗಳಾಗಿ ಕಾಣಬರುತ್ತಿದ್ದುವು, ವಾಯುಗಳು ಹಾಯಾಗಿ ಬೀಸತೊಡಗಿದುವು, ಅಗ್ನಿಯು ಬಲವಂದು ಹವಿಸ್ಸನ್ನು ಕೈಗೊಂಡನು, ಆ ಕಾಲದಲ್ಲಿ ಎಲ್ಲವೂ ಶುಭವನ್ನು ಸೂಚಿಸುತಲಿದ್ದಿತು, ಅಹಹ! ಇಂತವರ ಹುಟ್ಟೇ ನಾಡಿನ ಮೇಲ್ಮೆಗಲ್ಲವೆ? ಹೊಲೆಮನೆಯೊಳಗೆ ಹಾಸಿಗೆಯಲ್ಲಿ ಪವಳಿಸಿರುವ ಮೇಲಾದ ಹುಟ್ಟುಳ್ಳ ಹಸುಳೆಯ ಮೈಬೆಳಕು ಸುತ್ತಲೂ ಹರಡಿದ್ದಿತು, ಆ ಮನೆಯಲ್ಲಿ ನಟ್ಟಿರುಳೊಳಿಟ್ಟ ದೀವಿಗೆಗಳು ಚಿತ್ರದಲ್ಲಿ ಬರೆದವುಗಳಂತೆ ಕಳೆಗುಂದಿದ್ದುವು. ಕೂಡಲೆ ರಾಣಿವಾಸದ ಜನರು ದುಡದುಡನೆ ಓಡಿಬಂದು "ಪುತ್ರೋತ್ಸವವಾಯಿತು ಪ್ರಭುವೇ" ಎಂದಮರ್ದಕ್ಕೆಣೆಯಾದ ವರ್ಣಾವಳಿಯನ್ನು ಉಸಿರಿದರು, ಅರಸು ಅವರಿಗೆ ಚಾಮರವನುಳಿದೆಲ್ಲ ಛತ್ರ ಮತ್ತು

ಚಾಮರಗಳನ್ನು ಮಾತ್ರವೇ ಕೊಡಲಿಕ್ಕಾಗಲಿಲ್ಲ. ಆಮೇಲೆ ಭೂಪಾಲನು ಬಲುಬೇಗನೆ ಸೂತಿಕಾ ಗೃಹದಬಳಿಗೆ ಬಂದನು, ಗಾಳಿಯಿಲ್ಲದೆಡೆಯೊಳಿಟ್ಟಿರುವ ದೀವಿಗೆಯಂತಲುಗದಿರುವ ದಿಟ್ಟಿಯಿಂದ ಮನೋಹರವಾದ ಮಗನ ಮೊಗ್ಗನ್ನು ನೋಡಿದನು. ಹುಣ್ಣಿಮೆಯ ಚಂದಿರನನ್ನು ನೋಡಿದೊಡನೆ ಕಡಲಿನ ಪಾತ್ರೆಯೊಳಗಣ ಜಲರಾಶಿಯಂತೆ, ಹೇರಳವಾದ ಹರ್ಷವು ಅಂತರಂಗದಲ್ಲಡಗದೆ ಉಕ್ಕುಳಿಸುತಲಿದ್ದಿತು. ಈ ಶುಭ ಸಮಾಚಾರವು ಕುಲಗುರುವಿಗೆ ತಿಳಿಯಿತು, ತಪಸ್ವಿಯು ತಪೋವನದಿಂದ ತಡಮಾಡದೆ ಬಂದನು, ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ಸಂತಸದಿಂದ ನೆರವೇರಿಸಿದನು. ಆಗ ದಿಲೀಪಕುಮಾರನು ಗಣಿಯಿಂದೆತ್ತಿ, ಸಾಣೆಯಬೇಸಾಯವನ್ನು ಪಡೆದ ರತುನದಹಾಗೆ ಮಿಗಿಲಾಗಿ ಬೆಳಗುತಲಿದ್ದನು. ಮಂಗಳವಾದ್ಯನಾದಗಳು ಕಿವಿಗಿಂಪಾಗಿ ಮೊಳಗುತಲಿದ್ದುವು, ಬೆಲೆವೆಣ್ಗಳ ಸಂತಸದ ಕುಣಿತಗಳೂ ಕಂಗೊಳಿಸಿದುವು, ಈ ಉತ್ಸವವು ದಿಲೀಪನ ಮನೆಯಲ್ಲಿ ಮಾತ್ರವಲ್ಲ; ಅಮರರ ಹಾದಿಯಲ್ಲಿಯೂ ನಡೆಯುತಲಿದ್ದಿತು, ಇಂತಹ ಮಹೋತ್ಸವಗಳ ಸಮಯದೊಳಗೆ ಅರಸರು ಸೆರೆಯಲ್ಲಿರುವವರನ್ನು ಬಿಡಿಸುವುದು ವಾಡಿಕೆ, ಧರ್ಮದಿಂದ ರಾಜ್ಯವನ್ನಾಳುವ ದಿಲೀಪನ ಬಂದೀಗೃಹದಲ್ಲಿ, ಹಾಗೆ ಅಪರಾಧದಿಂದ ಬದ್ಧರಾದವರೇ ಇರಲಿಲ್ಲ. ಸಂತಾನದ ಸಂತಸದಿಂದಾರನ್ನು ಬಿಡಿಸುವುದು? ಆದಕಾರಣ ಪಿತೃಋಣದಿಂದ ಬದ್ಧನಾಗಿದ್ದ ತಾನೇ ಬಿಡುಗಡೆಯನ್ನು ಹೊಂದಿದನು.

ಒಳಕ ಅರ್ಥಜ್ಞನಾದ ಪಾರ್ಥಿವನು ಶಾಸ್ತ್ರಗಳ ಕೊನೆಯನ್ನೂ, ಕಾಳಗದಲ್ಲಿ ಹಗೆಗಳ ಕೊನೆಯನ್ನೂ, ಈ ಆತ್ಮಜನು ಕಾಣುವನು (ಗಮಿಸುವನು) ಎಂದು ತಿಳಿದೇ, ಗಮನಾರ್ಥದ ಧಾತುವಿನಿಂದ ಸಿದ್ಧವಾದ ರಘು ಎಂಬ ಹೆಸರಿನಿಂದ ಕುಮಾರನಿಗೆ ನಾಮಕರಣದ ಹಬ್ಬವನ್ನು ನೆರವೇರಿಸಿದನು, ರಘುವು-ಪೂರ್ಣ ಸಂಪನ್ನನಾದ ತಂದೆಯ ಪ್ರಯತ್ನ ವಿಶೇಷದಮೂಲಕ ಹೊಮ್ಮುತಲಿರುವ ಅಂದವಾದ ಅವಯವಗಳಿಂದ ಬೆಳಗಿದನು ರವಿಯ ಕಿರಣಗಳು ಒಳಹೊಗುವುದರಿಂದ ಬಾಲಚಂದ್ರನಂತೆ ದಿನದಿನಕ್ಕೂ ಬೆಳವಳಿಗೆಯನ್ನು ಹೊಂದುತಲಿದ್ದನು. ಕುಮಾರಸ್ವಾಮಿಯಿಂದ ಉಮಾಮಹೇಶ್ವರರಹಾಗೂ, ಜಯಂತನಿಂದ ಶಚೀಪುರಂದರ

ರಂಕೆಯೂ, ಸುದಕ್ಷಿಣಾ ದಿಲೀಪರು ಆ ಕುಮಾರರಿಗೆಣೆಯಾದ ಕುಮಾರನಿಂದ ತಾವೂ, ಆ ದಂಪತಿಗಳಿಗೆಣೆಯೆನಿಸಿ ಆನಂದಿಸುತಲಿದ್ದರು. ಆ ಗಂಡಹೆಂಡಿರುಗಳೊಳಗೆ ಚಕ್ರವಕ್ಕಿಗಳಂತೆ ಒಬ್ಬರಮೇಲೊಬ್ಬರಿಗಿದ್ದ ಪ್ರೇಮವು-ಆ ಹಸುಳೆಯಿಂದ ಹಂಚಿಕೆಯನ್ನು ಪಡೆದವರೂ, ಈಕೆಯಿಂದ ನನಗೆ ಇಂತಹ ಸಂತಾನವಾಯಿತೆಂದು ಆತನಿಗೂ, ಈತನಿಂದ ತನಗೆ ಇಂತಹ ಸುಕುಮಾರನು ಸಂಭವಿಸಿದನೆಂದು ಆಕೆಗೂ ಅನ್ಯೋನ್ಯತೆಯಿಂದ ಹೆಚ್ಚುತಲೇ ಇದ್ದಿತು. ಆಮೇಲೆ ಆ ಕಂದನು ದಾದಿಯು ಕಯ್ಯಡು ಮಾಡಿಕೊಂಡು, ತಪ್ಪು ಹೆಜ್ಜೆಯನ್ನಿಡುತ್ತಾ, ನಡೆಯಲಿಕ್ಕೆ ಮೊದಲಿಟ್ಟನು. ಆಕೆಯು ಮೊಟ್ಟಮೊದಲು ಹೇಳಿಕೊಡುವ ಮಾತುಗಳನ್ನು ತೊದಲಿತೊದಲಿ ಮುದ್ದುಮುದ್ದಾಗಿ ಆಡತೊಡಗಿದನು. ಪ್ರೊಡಮಾಡುವ ಕಲಿಕೆಯಿಂದ ನಮ್ರನೂ ಆಗುತಲಿದ್ದನು, ಇದರಿಂದ ಹೆತ್ತವರಿಗೆ ಹೆಚ್ಚಳವನ್ನು ಹೆಚ್ಚಿಸಿದನು. ಅರಸು ಮೈಸೋಂಕಿನಿಂದುಂಟಾವ ಸುಖಗಳಿಂದ ತನ್ನ ಶರೀರದಲ್ಲಿ ಅಮೃತವನ್ನು ಹೊಗಿಸುವಂತಿರುವ ತನೂಭವನನ್ನು ತಬ್ಬಿ, ತೊಡೆಯಮೇಲೆ ಕೂಡಿಸಿಕೊಂಡು, ಅರೆಮುಗಿದ ಕಣ್ಣುಳ್ಳವನಾಗಿ, ಬಹುಕಾಲದಮೇಲೆ ಮಕ್ಕಳನ್ನೆತ್ತಿಕೊಂಬುದರಿಂದುಂಟಾಗುವ ರುಚಿಯು ಇಂಥದು ಎಂಬುದನ್ನು ಅರಿತನು. ಮತ್ತಂ ಚತುರ್ಮುಖನು ಸತ್ವ, ರಜ, ತಮಗಳೆಂಬ ಗುಣಗಳೊಳಗೆ ಮೊದಲನೆಯದಕ್ಕೆ ಆಸರೆಯಾಗಿ, ತನ್ನ ಬೇರೊಂದು ರೂಪವಾಗಿರುವ ವಿಷ್ಣುವಿನಿಂದ, ತನ್ನ ಸೃಷ್ಟಿಯು ತೊಂದರೆಯಿಲ್ಲದಿರುವುದೆಂದರಿಯುವಹಾಗೆ, ಲೋಕಮರ್ಯಾದೆಯನ್ನು ಬಲ್ಲ ಅರಸು - ವಿದ್ಯಾವಿನಯಾದಿ ಸತ್ವಗುಣಗಳಿಗೆಡೆಯಾಗಿ, ತನ್ನ ರೂಪಾಂತರವಾಗಿರುವ ಉತ್ತಮನಾದ ಕುಮಾರನಿಂದ, ತನ್ನ ಸಂತತಿಯೂ ಸುಖವಾಗಿ ನೆಲೆಗೊಂಡಿರುವುದೆಂದು ತಿಳಿದುಕೊಂಡನು,

ರಘುವಿಗೆ ಜುಟ್ಟುಬಿಡಿಸುವ ಹಬ್ಬವಾಯಿತು. ತನ್ನಂತೆ ಜುಳುಪೆಕೊದಲಿನವರೂ, ಓರಗೆಯ ವಯಸ್ಸಿನವರೂ ಆಗಿರುವ ಮಂತ್ರಿಕುಮಾರರೊಡನೆ ಓದು ಕಲಿಯತೊಡಗಿ, ಮೊಸಳೆ ಮೊದಲಾದ ಪ್ರಾಣಿಯು - ಹೊಳೆಯಮೂಲಕ ಕಡಲನ್ನು ಹೊಗುವಂತೆ, ವರ್ಣಮಾಲೆಯ ಅರಿವಿನ ಮೂಲಕ-ಶಬ್ದಜಾಲವನ್ನು ಪ್ರವೇಶಿಸಿದನು. ಅದುವರೆಗೆ ಹನ್ನೊಂದನೆಯ

ವಯಸ್ಸಿನವನಾದನು, ಕ್ರಮಪ್ರಕಾರ ಮುಂಜಿಯಾಯಿತು. ವಿದ್ಯಾವಂತರಾದ ಗುರುಗಳು - ತಮಗೆ ಬಹು ಇಷ್ಟನಾಗಿರುವ ಆ ಅರಸು ಮಗನಿಗೆ ವಿದ್ಯಾಬುದ್ಧಿಗಳನ್ನು ಕಲಿಸುವಾಗ ಅವರ ಉದ್ಯೋಗವು ವ್ಯರ್ಥವಾಗಲಿಲ್ಲ, ಸತ್ಪಾತ್ರದಲ್ಲಿ ವಿನಿಯೋಗಿಸಿದ ಶಿಕ್ಷೆಯು ವಿಫಲವಾಗುವುದುಂಟೆ? ರವಿಯು - ಪವನನಿಗಿಮ್ಮಡಿಯಾಗಿ ನಡೆವ ವಾಜಿಗಳಿಂದ ದೆಸೆಗಳನ್ನು ದಾಂಟುವಹಾಗೆ, ಉತ್ತಮ ಬುದ್ಧಿಯುಳ್ಳ ರಘುವು ಬುದ್ಧಿಯ * ಪೂರ್ಣ ಗುಣಗಳಿಂದ ನಾಲ್ಕು ಕಡಲುಗಳಿಗೆಣೆಯೆನಿಸಿದ* ನಾಲ್ಕು ವಿದ್ಯೆಗಳನ್ನೂ ದಾಟಿದನು, ಅಮೇಲೆ - ರುರುಮೃಗದ ಪಾವನವಾದ ಚರ್ಮವನ್ನು ಹೊದೆದು, ಅಸ್ತ್ರವಿದ್ಯೆಯನ್ನೆಲ್ಲ ಮಂತ್ರಸಹಿತವಾಗಿ ತನ್ನ ತಂದೆಯಿಂದಲೇ ಕಲಿತನು. ಆದರೆ ದಿಲೀಪನು ಇದಿರಾಳಿಲ್ಲದ ದೊರೆಯು ಮಾತ್ರವೇ ಆಗಿರಲಿಲ್ಲ; ನೆಲದಲ್ಲಿ ಎಣೆಯಿಲ್ಲದ ಬಿಲ್ಲಾಳೂ ಆಗಿದ್ದನು. ಎಳೆಗರುವು - ದೊಡ್ಡ ಗೂಳಿಯಾಗುವಹಾಗೂ, ಆನೆಯ ಮರಿಯು ಹಿರಿಯಾನೆಯೆನಿಸಿದ ಸಲಗನಾಗುವಹಾಗೂ, ಕಾಲಕ್ರಮದಲ್ಲಿ ಹರವಯದಿಂದ ಹುಡುಗತನವನ್ನು ದಾಟ್ಕಿ ದೊಡ್ಡತನದಿಂದ ಅಂದವಾದ ಒಡಲಿನ ಹೊರವನ್ನು ಪಡೆದನು.

ಹೀಗೆ ಜ್ಞಾನಗುಣಗಳೊಡನೆ ಬೆಳೆಯುತಲಿರುವ ರಘುವಿಗೆ ಇಪ್ಪತ್ತೊಂದು ವರ್ಷಗಳು ಕಳೆದುವು, ಬಳಿಕ ತಂದೆಯು ಈತನಿಗೆ ಗೋದಾನ ವಿಧಿಯನ್ನು ನೆರವೇರಿಸಿ, ವಿಧಿಪ್ರಕಾರ ವಿವಾಹ ಮಹೋತ್ಸವವನ್ನೂ ನೆರವೇರಿಸಿದನು. ದಕ್ಷಪುತ್ರಿಯರು ಕತ್ತಲನ್ನು ಕತ್ತರಿಸುವ ಸತ್ಪತಿಯನ್ನು ಪಡೆದು ಸಂತೋಷಿಸುವಹಾಗೆ, ರಾಜಕನ್ಯೆಯರೂ ಉತ್ತಮನೆನಿಸಿರುವ ಸತ್ಪತಿಯಾದ ರಘುವನ್ನು ವರಿಸಿ ಸಂತೋಷಿಸುತ್ತಿದ್ದರು. ತರುಣನಾದ ರಘುವಿಗೆ ಪ್ರಾಯದ ಹೊಮ್ಮಿನಿಂದ ತೋಳುಗಳು ನೊಗದಂತೆ ಬಲು ನೀಳವಾಗಿಯೂ, ತೋರವಾಗಿಯೂ, ದುಂಡಾಗಿಯೂ ಇದ್ದುವು. ಕದದಂತೆ ಎದೆಯು ಬಲು ಅಗಲವಾಗಿದ್ದಿತು. ಹೆಗ್ಗತ್ತು ಒಲಿತು ದುಂಡಗೆ ಬಹು ಅಂದವಾಯಿತು. ಹೀಗೆ ಒಡಲಿನ ಬೆಡಗನಿಂದ ತಂದೆಯನ್ನು ಗೆದ್ದನು. ಆದರೆ ವಿನಯದಲ್ಲಿ ಮಾತ್ರ ಬಲು ತಗ್ಗಿದವನಾಗಿಯೇ ಇದ್ದನು.

ಆ ಬಳಿಕ ಪ್ರಜಾನಾಥನಾದ ದಿಲೀಪನು - ಬಹು ಕಾಲದಿಂದ ತನ್ನ ಹೆಗಲಮೇಲೆ ಹೊತ್ತಿರುವ ಪ್ರಜೆಗಳನ್ನಾಳತಕ್ಕ ಹೇರಳವಾದ ಹೊರೆಯನ್ನು ಸ್ವಲ್ಪ ಹಗುರವಾಗುವಂತೆ ಮಾಡಿಕೊಳ್ಳಬೇಕಂದು ನೆನೆದು, "ಹುಟ್ಟಿದ್ದು ಮೊದಲು ಸ್ವಭಾವದಿಂದಲೂ, ವಿದ್ಯಾಭ್ಯಾಸದಿಂದಲೂ ತನ್ನ ಮಗನು ಚನ್ನಾಗಿ ಪಳಗಿ, ವಿನಯಾದಿ ಸುಗುಣಸಂಪನ್ನನಾಗಿದಾನೆ, ಇನ್ನು ಮೇಲೆ ಖಂಡಿತವಾಗಿ ಹೆಮ್ಮೆಗೆ ಒಳಗಾಗುವುದಿಲ್ಲ" ಎಂದು ತಿಳಿದು, ಅವನನ್ನು ಯುವರಾಜ ಪದವಿಯಲ್ಲಿ ನೆಲೆಗೊಳಿಸಿದನು, ಚೆನ್ನಾಗಿ ಅರಳಿರುವ ತಾವರೆಯಲ್ಲಿ ಬಹಳ ಹೊತ್ತಿನಿಂದ ನೆಲೆಗೊಂಡಿದ್ದ ಕಾಂತಿ ಲಕ್ಷ್ಮಿಯು - ಹೊಸದಾಗಿ ಅರಳುತ್ತಿಲಿರುವ ನೈದಿಲೆಯಲ್ಲಿ ಸುವಾಸನೆಯೇ ಮೊದಲಾದ ಗುಣದ ಆಶೆಯಿಂದ, ತನ್ನ ಒಂದು ಭಾಗವನ್ನು ನೆಲೆಗೊಳಿಸುವಹಾಗೆ, ದಿಲೀಪನಲ್ಲಿ ಬಹುಕಾಲದಿಂದ ನೆಲೆಗೊಂಡಿರುವ ರಾಜ್ಯ ಲಕ್ಷ್ಮಿಯೂ ಹೊಸದಾಗಿ ಯುವರಾಜ ಪದವಿಯನ್ನು ಪಡೆದಿರುವ ರಘುವಿನಲ್ಲಿ ವಿನಯಾದಿ ಸುಗುಣಗಳ ಬಯಕೆಯಿಂದ, ಮೆಲ್ಲಗೆ ಬಂದಡಿಯನ್ನಿಟ್ಟಳು. ಆಗ-ಅನಿಲಸಿಂದ ಅನಲನಹಾಗೂ, ಮಳೆಗಾಲವು ತೊಲಗುತ ಬರುವುದರಿಂದ ರವಿಯಹಾಗೂ, ಮದವೇರುತ ಬರುವಲ್ಲಿ ಕಪೋಲದ ಬಿರಿತದಿಂದ ಆನೆಯ ಹಾಗೂ, ತನಗೆ ಊಡಾಗುತಲಿರುವ ರಘುವಿನಿಂದ ಅರಸು ಬಲು ಅಸದಳನೆನಿಸಿದನು.

ತರುವಾಯ - ಶತಮುಖನಿಗೆಣೆಯೆನಿಸಿದ್ದ ದಿಲೀಪನು - ರಾಜಕುಮಾರನಿಂದ ಹಿಂಬಾಲಿಸಲ್ಪಟ್ಟಿರುವ ಬಿಲ್ಲಾಳಾದ ರಘುವನ್ನು ಹೋಮಾಶ್ವಗಳ ರಕ್ಷಣೆಗಾಗಿ ನೇಮಿಸುತ್ತಾ, ಒಂದು ಕಡಮೆ ನೂರು ಯಾಗಗಳನ್ನು ಕ್ರಮವಾಗಿ ಅಡ್ಡಿಯಿಲ್ಲವಂತೆ ಆಚರಿಸಿದನು, ಆ ಹಿಂದೆ - ವಿಧಿಯಪ್ರಕಾರ ಕ್ರತುವನ್ನೆಸಗುತಲಿರುವ ದಿಲೀಪನು ಉಳಿದ ನೂರನೆಯ ಯಜ್ಞವನ್ನೂ ನೆರವೇರಿಸಬೇಕೆಂದು ಬಗೆದು, ಮರಳಿಬಿಟ್ಟ ಅಧ್ವರದ ಅಶ್ವವು ತಡೆಯಿಲ್ಲದೆ ನಡೆಯುತಲಿರುವಲ್ಲಿ, ಕಾವಲುಗಾರರಾದ ಬಿಲ್ಲಾಳುಗಳ ಇದಿರಿಗೇ, ಅರಿತಕ್ಕೆ ಬಾರದಮೈಯುಳ್ಳವನಾಗಿ ಇಂದ್ರನು ಅವನ್ನು ಅಹಹ! ಅಪಹರಿಸಿದನು. ಆಗ ರಘುವಿನ ಸೇನೆಯು ಬಲು ಕಳವಳಗೊಂಡಿತು, ಮುಂದೇನು ಮಾಡಬೇಕೆಂಬುದನ್ನು ಅರಿಯಲಿಲ್ಲ, ಅಚ್ಚರಿಗಡೆಯಿಲ್ಲದಂತಾಯಿತು; ಜಡವಾಗಿ ನಿಂತಿತು. ಮುಂದಿನ

ಆಗುಹೋಗುಗಳನ್ನು ಮೊದಲೇ ಕಾಣುವವರಾರು ? ಅಷ್ಟು ಹೊತ್ತಿಗೆ ಸರಿಯಾಗಿ ಎಲ್ಲಿಂದಲೋ, ಯಾವ ಕಾರಣದಿಂದಲೋ ಮಹಾಮಹಿಮೆಯ ವಶಿಷ್ಠ ಮುನೀಂದ್ರನ ಧೇನುವಾದ ನಂದಿನಿಯು - ರಘುವು ತನ್ನ ವರಕುಮಾರನೆಂಬ ಮಮತೆಯಿಂದ ಅನುಗ್ರಹಿಸಲಿಕ್ಕೆಂಬಂತೆ ಹೇಗೋ ಬಂದು ಕಾಣಿಸಿಕೊಂಡಿತು. ಸಜ್ಜನರೊಳಗೆ ಮೊದಲನೆಯವನೆನಿಸಿದ ರಘುವು- ಆ ಧೇನುವಿನ ದರ್ಶನವಾದ ಕೂಡಲೇ ಭಕ್ತಿಯಿಂದ ಶಿರಬಾಗಿ, ಅದರ ಪಾವನವಾದ ಗಂಜಲವನ್ನೆತ್ತಿ ಕಣ್ಣಿಗೊತ್ತಿ ತೊಡೆದುಕೊಂಡನು. ಆ ಕೂಡಲೇ ಕಣ್ಣಿಗೆ ಕಾಣಬಾರದ ವಸ್ತುವನ್ನೂ ಕಣ್ಣಿನಿಂದ ನೋಡತಕ್ಕ ಶಕ್ತಿಯನ್ನು ಪಡೆದನು. ಜನಪಾಲ ತನಯನು - ಹಾಗೆಯೇ ತಲೆಯನ್ನೆತ್ತಿ ಮೂಡಲಕಡೆಗೆ ಕಣ್ಣುತೆರೆದನು, ಇದಿರಿಗೆ ಬಾಂದಳದೊಳಗೆ ತನ್ನ ಕುದುರೆಯನ್ನು ತೇರಿನ ಹಗ್ಗದಿಂದ ಕಟ್ಟಿದೆ, ಅದನ್ನು ಬಿಡಿಸಿಕೊಳ್ಳಲು ಕುದುರೆಯು ಮೈಯ್ಯನ್ನು ಕೊಡಹುತಲಿದೆ, ಸಾರಥಿಯು ಅದರ ಚೇಷ್ಟೆಯನ್ನು ತಡೆಯುತಲಿದ್ದಾನೆ, ಈ ದಶೆಯೊಳಿರುವ ತನ್ನ ಅಶ್ವವನ್ನು ಒಯ್ಯುತ್ತಾ, ಬೆಟ್ಟಗಳ ರೆಕ್ಕೆಗಳನ್ನು ಕತ್ತರಿಸಿದ ಇಂದ್ರನು ರಥದ ಮೇಲೆ ಕುಳಿತಿರುವುದನ್ನು ಕಂಡನು. ರಘುವು - ಕುದುರೆಯ ಕಳ್ಳನನ್ನು ರೆಪ್ಪೆಬಡಿಯದಿರುವ ನೂರು ಕಣ್ಣುಗಳಿಂದಲೂ, ತೇರಿಗೆ ಕಟ್ಟಿರುವ ಹಸಿರು ಬಣ್ಣದ ಕುದುರೆಗಳಿಂದಲೂ, ದೇವೇಂದ್ರನನ್ನಾಗಿ ಅರಿತು, ಮುಗಿಲನ್ನು ಮುಟ್ಟುತಲಿರುವ ನೀಳವಾದ ದನಿಯಿಂದ, ಅವನನ್ನು ತಡೆದು ಹಿಂತಿರುಗಿಸುವವನಂತೆ ಇಂತೆಂದನು:—

ಅಹಹ! ಎಲೈ ದೇವತೆಗಳಿಗೊಡೆಯನೇ! ಯಜ್ಞದ ಹವಿಸ್ಸಿನ ಭಾಗಗಳನ್ನು ಭುಜಿಸುವವರೊಳಗೆ ನೀನೇ ಮೊದಲನೆಯವನೆಂದು ವಿದ್ವಾಂಸರೆಲ್ಲ ಯಾವಾಗಲೂ ನಿನ್ನನ್ನು ಹೊಗಳುತ್ತಾರೆ, ಇಂತಹ ನೀನೇ ಅನವರತವೂ ಅಧ್ವರದ ದೀಕ್ಷೆಯೊಳಿರುವ ನಮ್ಮ ತಂದೆಯ ಸತ್ಕರ್ಮವನ್ನು ಹಾಳುಮಾಡಲಿಕ್ಕೆ ಹೀಗೆ ಮುಂದರಿಯುತ್ತೀಯೆ? ಓಹೋ ! ಬಹಳ ಚೆನ್ನಾಯಿತು!! ನೀನು ಮೂಲೋಕವನ್ನಾಳುವ ನಾಯಕನಲ್ಲವೆ ? ಜ್ಞಾನದೃಷ್ಟಿಯಿಂದರಿತು, ಯಾಗಗಳಿಗೆ ಅಡ್ಡಿಮಾಡುವ ಹಗೆಗಳನ್ನು ನೀನೇ ಅಡಗಿಸಬೇಕಲ್ಲವೆ ? ಹಾಗಲ್ಲದೆ - ಯಜ್ಞವೇ ಮುಂತಾದ ಧರ್ಮಕಾರ್ಯಗಳನ್ನು ಮಾಡುವವರಿಗೆ ನೀನೇ

ತಡೆಯಾಗುವುದಾದರೆ, ಲೋಕದಲ್ಲಿ ಸತ್ಕರ್ಮಾಚರಣೆಯು ಸುದ್ದಿಯೇ ಮುಳುಗಿಹೋಯಿತೆಂಬುದರಲ್ಲಿ ಸಂದೇಹವೇನು? ಆದರಿಂದ ಎಲೈ ಅಮರೇಶ್ವರನೆ! ಮಹತ್ತಾದ ಅಶ್ವಮೇಧಕ್ಕೆ ಅಂಗವಾಗಿ ಶ್ರೇಷ್ಠವೆನಿಸಿರುವ ಈ ಹಯವನ್ನು ನೀನು ಬಿಟ್ಟು ಕಳುಹುವುದು ಧರ್ಮ. ಲೋಕದಲ್ಲಿ ವೇದವಿಹಿತವಾದ ಸನ್ಮಾರ್ಗವನ್ನು ತಿಳುಹತಕ್ಕವರು ಮಲಿನವಾದ ಹಾದಿಯಲ್ಲೆಂದಿಗೂ ಹೆಜ್ಜೆಯನ್ನಿಡುವುದಿಲ್ಲ.

ಇಂತು - ಬಹು ಪ್ರೌಢಿಮೆಯಿಂದ ಹೇಳುತಲಿರುವ ರಘುವಿನ ನುಡಿಯನ್ನಾಲಿಸಿ, ಅಚ್ಚರಿಗೊಂಡ ದಿವೌಕಸರೊಡೆಯನು ಥಟ್ಟನೆ ತೇರಂ ತಿರುಗಿಸಿ ಮಾರುತ್ತರವನಂತು ಕೈಗೊಂಡನು—

ಎಲೈ ಅರಸು ಮಗನೇ! ನೀನು ಹೇಳಿದುದೆಲ್ಲ ದಿಟ. ಆದರೆ - ಲೋಕದಲ್ಲಿ ಯಾರಾದರೆ ಒಳ್ಳೆಯ ಹೆಸರುವಾಸಿಯನ್ನೇ ಹಣವನ್ನಾಗಿ ನಿಶ್ಚಯಿಸಿರುವರೋ, ಅಂಥವರು - ಆ ತಮ್ಮ ಹೆಸರಿಗೆ ಕುಂದುಂಟಾಗದಂತೆ ಕಾಪಾಡಿಕೊಳ್ಳಲೇಬೇಕು, ನಿಮ್ಮ ತಂದೆಯು - ಈ ಯಾಗವನ್ನು ಮಾಡಿ, ಜಗತ್ತಿನಲ್ಲೆಲ್ಲ ಬೆಳಗುತಲಿರುವ ನನ್ನ ಕೀರ್ತಿಯನ್ನು ಅತಿಕ್ರಮಿಸಲಿಕ್ಕೆ ಪ್ರಯತ್ನಿಸಿದ್ದಾನೆ.

ಪ್ರಪಂಚದಲ್ಲಿ - ಪುರುಷೋತ್ತಮನೆಂಬ ಬಿರುದು ಶ್ರೀಹರಿಗೊಬ್ಬನಿಗಲ್ಲದೆ ಬೇರೊಬ್ಬರಿಗೆ ಸಲ್ಲದು, ಮುಕ್ಕಣ್ಣನೊಬ್ಬನೇ ಮಹೇಶ್ವರನೆಂಬ ಹೆಸರಿಗೆ ಗುರಿಯಲ್ಲದೆ ಬೇರಾರೂ ಅಲ್ಲ. ಹಾಗೆಯೇ ಮುನಿಗಳೆಲ್ಲರೂ ನನ್ನನ್ನು, ಶತಮುಖನೆಂದು ಕರೆಯುತ್ತಾರೆ, ಆ ಹರಿಹರರಂತೆ ಈ ನನ್ನ ಹೆಸರೂ ಎರಡನೆಯವರಿಗೆ ಸಲ್ಲತಕ್ಕುದಲ್ಲ. ಇಂತು ಶತಕ್ರತುವೆನಿಸಿದ ನಾನು - ಕಪಿಲ ಮುನಿಯಂತೆ ನಿಮ್ಮಪ್ಪನ ಈ ಕುದುರೆಯನ್ನು ಕಳವು ಮಾಡಿದೇನೆ, ಇದನ್ನು ಬಿಡಿಸಿಕೊಂಬ ವಿಷಯದಲ್ಲಿ ನಿನ್ನ ಪ್ರಯತ್ನವನ್ನು ನಿಲ್ಲಿಸು, ಸಗರ ಚಕ್ರವರ್ತಿಯ ಮಕ್ಕಳ ಹಾದಿಯಲ್ಲಿ ಅಡಿಯನ್ನಿಟ್ಟು ಕೆಡಬೇಡ ಎನಲು, ಅಶ್ವಮೇಧಾಶ್ವದ ಅಂಗರಕ್ಷಕನಾದ ರಘುವು ಆ ಪುರಂದರನ ನುಡಿಗೆ ತುಸ ನಕ್ಕು, ಎಲೈ ಪುರೂಹುತನೇ! ಈ ಕುದುರೆಯನ್ನು ಬಿಟ್ಟುಕೊಡುವುದಿಲ್ಲವೆಂಬುದೇ ನಿನ್ನ ನಿಜವಾದ ಸಂಕಲ್ಪವಾಗಿದ್ದರೆ, ಕಯ್ಯಲ್ಲಿ ಬಿಲ್ಲನ್ನು ಹಿಡಿ, ಸರಳನ್ನು ತೊಡು, ಈ ರಘುವನ್ನು ಗೆಲ್ಲದೆ ನಿನ್ನನ್ನು ಕೃತಕೃತ್ಯನೆಂದು ಎಂದಿಗೂ ಭಾವಿಸಬೇಡ ಎಂದು

ಹೇಳದುದಲ್ಲದೆ, ಅವನಿದಿರಿಗೆ ಚಾಪದಲ್ಲಿ ಹೆದೆಯನ್ನೇರಿಸಿ, ಶರಸಂಧಾನವಂ ಮಾಡಲು ಅಣಿಯಾಗುತ್ತಾ, ಬಲಗಾಲಿನ ಮಂಡಿಯನ್ನು ಮುಂದಕ್ಕೆ ನೀಡಿ, ಎಡಗಾಲನ್ನು ಹಿಂದಕ್ಕೆ ಸರಿದು, ಮಂಡಿಯನ್ನು ತಗ್ಗಿಸಿ ಬಿಲ್ಲಾಳುಗಳು ಕಾಳಗದಲ್ಲಿ ನಿಲ್ಲುವ ಆಲೀಢವೆಂಬ ಮೋಡಿಯ ಬಡಲಿ ನಿಂದ ಪಿನಾಕಪಾಣಿಯಂತೆ ಬೆಡಗುಗೊಂಡು ನಿಂತನು. ಕೂಡಲೆ ಕಂಬದಂತೆ ಬಲು ಗಡುಸಾದ ಬಾಣದಪೆಟ್ಟು ಎದೆಗೆ ಬಡಿಯಿತು, ಗಾಯವಾಯಿತು, ಗೋತ್ರಾರಿಗೆ ಬಲು ಸಿಟ್ಟು ಹತ್ತಿತು ಮುಂಗಾರಿನ ಮೋಡಗಳ ಹಿಂಡಿಗೆ ಕ್ಷಣಕಾಲ ಸಿಂಗರವಾಗಿರುವ ತನ್ನ ಬಿಲ್ಲಿನಲ್ಲಿ ಕೂಡಲೇ ಸಫಲವಾಗತಕ್ಕುದೆನಿಸಿದ ಶರವನ್ನು ತೊಟ್ಟು ಇಟ್ಟನು. ಇಂದ್ರನ ಅಂಬು ಆದಿನವರೆಗ ಭಯಂಕರರೆನಿಸಿದ ರಕ್ಕಸರೊಡಲ ರಕುತವ ರುಚಿಯನ್ನು ಮಾತ್ರವೇ ಬಲ್ಲುದಾಗಿದ್ದಿತು. ರಘುವಿನ ಇಂಬಾದ ಭುಜಾಂತರವನ್ನು ಹೊಕ್ಕಿತು, ಹಿಂದೆ ಕುಡಿದು ಸವಿಗಂಡರಿಯದ ಮನುಷ್ಯ ಶೋಣಿತವನ್ನು ಬಯಕೆಗೊಂಡಿರುವುದೆಂಬಂತೆ ಕುಡಿಯಿತು. ಬಳಿಕ - ಕುಮಾರ ವಿಕ್ರಮನಾದ ರಘುಕುಮಾರನೂ ಐರಾವತದ ಕೊರಳನ್ನು ಆಗಾಗ ತಟ್ಟುವುದರಿಂದ ಪೆಡಸಾದ ಬೆರಳುಳ್ಳುದೂ, ಶಚೀದೇವಿಯ ಕಪೋಲದ ಕಸ್ತೂರಿಯ ಗುರುತುಳ್ಳುದೂ ಆಗಿರುವ ಇಂದ್ರನ ತೋಳಿನಲ್ಲಿ, ತನ್ನ ನಾಮಾಕ್ಷರಗಳಿಂದ ಬೆಳಗುವ ಸರಳನ್ನು ನಟ್ಟನು, ಮತ್ತು - ವೇಗಕ್ಕೋಸುಗ ಇಕ್ಕೆಲದಲ್ಲಿಯೂ ನವಿಲುಗರಿಯನ್ನು ತಗಲಿಸಿರುವ ಮತ್ತೊಂದು ಬಾಣವನ್ನು ಬಿಟ್ಟು, ಶಕ್ರನ ತೇರಿನ ವಜ್ರರೂಪವಾದ ದಾಳವನ್ನು ಕತ್ತರಿಸಿದನು, ಅದರಿಂದ ಸುರನಾಯಕನು ಸ್ವರ್ಲೋಕದ ಸಾಮ್ರಾಜ್ಯಲಕ್ಷ್ಮಿಯ ಮುಂದಲೆಯನ್ನು ಬಲಾತ್ಕಾರವಾಗಿ ಹಿಡಿದೆಳೆದರೆ ಹೇಗೋಹಾಗೆ, ಅಪಾರವಾದ ರೋಷವನ್ನು ತಾಳಿದನು, ಹೀಗೆ ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಕುತೂಹಲವು ಹೆಚ್ಚುತ್ತಲಿದ್ದಿತು. ಬಾಂದಳದೊಳು ನಿಂತು ಕೆಳಮುಖವಾಗಿಯೂ, ನೆಲದಲ್ಲಿ ನಿಂತು ಮೇಲುಮೊಗನಾಗಿಯೂ ಇಡುತ್ತಲಿರುವ ಭಯಂಕರಗಳಾದ ಸರ್ಪಗರುಡರಂತಹ ಸರಳುಗಳಿಂದ ಇಂದ್ರ ರಘುಗಳಿಬ್ಬರಿಗೂ ದೊಂಬಿಯ ಕಾಳಗವು ನಡೆಯುತಲಿದ್ದಿತು. ಸುರಾಧಿಪನ ಸಮೀಪದಲ್ಲಿ ಸಿದ್ಧರೂ, ದಿಲೀಪ ಕುಮಾರನ ಇಕ್ಕೆಲದಲ್ಲಿ ಸೈನಿಕರೂ ನಿಂತು ನೋಡುತಲಿದರು. ಆಗ - ಮೋಡವು ತನ್ನ ಮೂಲಕವೇ

ಹೊರಗೆ ಹೊರಟ ಸಿಡಿಲಿನ ಬೇಗೆಯನ್ನು ತನ್ನಿಂದುದಿರಿದ ಹನಿಗಳಿಂದ ಆರಿಸಲಳವಲ್ಲದಹಾಗೆ, ಎಡೆಬಿಡದೆ ಬಿಡುತಲಿರುವ ಬಾಣಗಳ ಹೊಯ್ಲಿನಿಂದ ಅಸದಳನೆನಿಸಿ ಪ್ರತಾಪಕ್ಕಾಸರೆಯಾದ ರಘುವನ್ನು ಅಡಗಿಸಲು ಸುರಪತಿಯು ಶಕ್ತನಾಗಲಿಲ್ಲ. ಇಂದ್ರನ ಕಯ್ಯ ಮಣಿಕಟ್ಟು ಕಲ್ಪತರುವಿನ ಚಂದನದ ಗುರುತನ್ನೊಳಗೊಂಡಿರವುದು. ಕಡೆತದ ವೇಳೆಯಲ್ಲಿನ ಕಡಲಿನಂತೆ ಬಿಲ್ಲಿನ ಹೆದೆಯಲ್ಲಿ ದನಿಗೈಸುತ ಶೌರ್ಯಸಂಪನ್ನನಾದ ಆ ಶಕ್ರನ ಬಿಲ್ಲಿನ ಹೆದೆಯನ್ನು, ಅರ್ಧಚಂದ್ರಾಕಾರವಾದ ಅಲಗನ್ನಾಂತಿರುವ ತನ್ನ ಶರದಿಂದ ರಘುವು ಕತ್ತರಿಸಿದನು, ಆಗ - ಇಂದ್ರನಿಗೆ ಕೋಪವು ತಲೆಗೇರಿತು, ಮತ್ಸರವು ಹೆಚ್ಚಿತು, ಪ್ರಬಲನಾದ ಹಗೆಯನ್ನು ಮುಗಿಸಲೇಬೇಕೆಂದು ನೆನೆದನು, ಬೆಟ್ಟಗಳ ರೆಕ್ಕೆಗಳನ್ನು ಕತ್ತರಿಸಲಿಕ್ಕೆ ತಕ್ಕುದೆನಿಸಿ, ಮಂಡಲಾಕಾರವಾದ ಬೆಳಕನ್ನು ತಳೆದಿರುವ ವಜ್ರವನ್ನು ಕಯ್ಯಲ್ಲಿ ಹಿಡಿದೆಸೆದನು. ಅದರ ಬಿರುಸಿನ ಪೆಟ್ಟು ರಘುವಿನೆದೆಯನ್ನು ಬಾಂಸಿತು, ಸೇನಾಜನರ ಕಣ್ಣೀರುಗಳೊಡನೆ ನೆಲದಲ್ಲಿ ಉರುಳಿದನು, ಆದರೂ ನಿಮಿಷಮಾತ್ರದಲ್ಲಿ ಆ ನೋವನ್ನು ತಿರಸ್ಕರಿಸಿ, ಸೈನಿಕರ ಸಂತೋಷದ ಸಿಂಹನಾದಗಳೊಡನೆ ತಟ್ಟನೆ ಎದ್ದು ನಿಂತನು. ಅಹಹ! ವಜ್ರಾಯುಧದ ಪೆಟ್ಟು ಬಿದ್ದರೂ ಹಿಂಜರಿಯದೆ, ಮರಳಿ ಸರಳಿನ ಹೋರಾಟದಿಂದ ಕ್ರೂರವಾಗಿರುವ ಹಗೆತನದಲ್ಲಿ ಚಲದಿಂದ ನಿಂದ ರಘುವಿನ ಹೇರಳವಾದ ಶೌರ್ಯವನ್ನು ಕಂಡು, ವೃತ್ರಾರಿಯು ಸಂತೋಷಪಟ್ಟನು, ವೀರನೇ ವೀರನ ಪರಿಯನ್ನು ಬಲ್ಲನು, ಎಲ್ಲೆಲ್ಲಿಯೂ ಸುಗುಣಗಳೇ ಮನಮಂ ಸೆಳೆಯುತಕ್ಕುವಲ್ಲವೆ ? ಇಂತಾದಬಳಿಕ ರಘುವನ್ನು ಕುರಿತು ಶಕ್ರನು—

ಎಲೈ ವೀರಕುಮಾರನೇ ! ಬೆಟ್ಟಗಳಲ್ಲಿಯೂ ಕಟ್ಟಿಲ್ಲದ ನನ್ನ ಈ ವಜ್ರಾಯುಧದ ಹೊಡೆತವನ್ನು ಇದುವರೆಗೆ ನೀನೊಬ್ಬನು ಹೊರತು ಮತ್ತಾರೂ ಸಹಿಸಿದುದೇ ಇಲ್ಲ. ಆದರಿಂದ ಈ ನಿನ್ನ ಯಾಗದ ತುರಗವನ್ನು ಬಿಟ್ಟುಕೊಡುವುದೊಂದನ್ನು ಬಿಟ್ಟು, ಮತ್ತಾವ ವರವನ್ನಾದರೂ ಕೇಳು, ಸಂತೋಷದಿಂದ ಕೊಡುತ್ತೇನೆ ಎಂದು ಸ್ಪಷ್ಟವಾಗಿ ಹೇಳಿದನು, ಬಂಗಾರದ ಗರಿಯ ಬೆಳಕಿನಿಂದ ಬೆಳಗುತಲಿರುವ ಬೆರಳುಗಳಿಂದ ಬಾಣವನ್ನು ಹಿರಿಯಲು ಬತ್ತಳಿಕೆಯೊಳಿಟ್ಟಿದ್ದ ಆ ಕರವನ್ನು

ಮುಂದರಿಸದೆ ನಿಲ್ಲಿಸಿ, ಪ್ರಿಯಭಾಷಣನಾದ ನರನಾಥನಂದನನು ವೃತ್ರಾರಿಯಂ ನೋಡಿ —

ಎಲೈ ದೇವನೇ! ಇನ್ನು ನಾನು ಬಾಣವನ್ನು ಬಿಡಬಾರದೆಂಬುದು ನಿನ್ನ ಮನದಣಿಕೆಯಾಗಿದ್ದರೆ, ನೇಮದಿಂದ ಯಾಗದೀಕ್ಷೆಯಲ್ಲಿಯೇ ನಲೆಗೊಂಡಿರುವ ನಮ್ಮ ತಂದೆಗೆ ನೂರನೆಯ ಯಾಗದ ಫಲವೂ ಸಲ್ಲುವಂತೆ ಅನುಗ್ರಹಿಸು. ಮತ್ತು - ಎಲೈ ಮೂಲೋಕದೊಡೆಯನೆ! ಮುಕ್ಕಣ್ಣನಂಶವನೊಳಗೊಂಡು ನನ್ನಂಥವರಿಂದ ಅತಿಕ್ರಮಿಸಲಸದಳನೆನಿಸಿರುವ ಪ್ರಜಾನಾಥನು ಯಜ್ಞವಾಟದೊಳಿರುವನಷ್ಟೆ? ಆತನಿಗೆ ಈ ಸುದ್ದಿಯನ್ನು ನಿನ್ನ ದೂತನಿಂದಲೇ ತಿಳಿಸಬೇಕು ಎಂದನು.

ಅದನ್ನು ಕೇಳಿ ಮಘವಂತನು ಹಾಗೆಯೇ ಆಗಲಿ ಎಂದು ಹೇಳಿ, ತನ್ನ ಸಾರಥಿಯಾದ ಮಾತಲಿಯೊಡನೆ ಸ್ವರ್ಗಾಭಿಮುಖನಾದನು, ಸುದಕ್ಷಿಣಾಸೂನುವು ಅಂತಾದರೂ ತಾನು ಪೂರ್ಣಕಾಮನಾದಷ್ಟು ಸಂತೋಷಿಸದೆ, ದಿಲೀಪನ ಯಾಗಶಾಲೆಯಂ ಕುರಿತು ಹಿಂದಿರುಗಿದನು—

ಅದುವರೆಗೆ ಪಾಕಶಾಸನನ ಶಾಸನವನ್ನು ಶಿರದೊಳಾಂತು ಬಂದ ದೇವದೂತನೊಬ್ಬನಿಂದ ಯಜ್ಞಭೂಮಿಯೊಳಿದ್ದ ಮನುಜೇಶ್ವರನು ಮೊದಲೇ ಆ ಸಂಗತಿಯನ್ನರಿತಿದ್ದನು. ಹಾಗೆಯೇ ಇದಿರ್ಗೈತಂದ ನಂದನನಂ ಕಂಡ ಭೂಮಂಡಲಾಧಿಪನು ಆನಂದಾಮೃತಭರದಿಂದ ಜಡವಾದ ಕರತಲದಿಂದ ಕುಮಾರನಂ ಅಪ್ಪಿದನು, ಕುಲಿಶಾಯುಧದ ಗಾಯದಿಂದ ಜಡ್ಡುಗಟ್ಟಿದ ತನಯನ ಮೆಯ್ಯನ್ನು ತಡಹುತ್ತಾ ಸಂತೋಷಿಸಿದನು. ಇಂತು ಅಡ್ಡಿಯಿಲ್ಲದಂತೆ ಅಪ್ಪಣೆಯನ್ನು ನಡೆಯಿಸುತ್ತಲಿದ್ದ ಆಪೊಡವಿಯೊಡೆಯನು ಆಯುಷ್ಯದ ಮುಗುವಳಿಯಲ್ಲಿ ನಾಕಲೋಕವನ್ನೇರಲು ಸೋಪಾನಗಳಂತಿರುವ ತೊಂಭತ್ತೊಂಭತ್ತು ಮಹಾಶ್ವಮೇಧಗಳನ್ನಾಚರಿಸಿ, ಸುಕೃತವನ್ನಣಿಮಾಡಿಟ್ಟನು. ಆಬಳಿಕ ರೂಪರಸಾದಿ ಸಮಸ್ತ ವಿಷಯಗಳಿಂದಲೂ ಮನಸ್ಸನ್ನು ಹಿಂದಿರುಗಿಸಿ, ರಾಜಲಕ್ಷಣವಾದ ಛತ್ರಚಾಮರಗಳನ್ನು ವಿಧಿಪ್ರಕಾರ ಮಗನಿಗೊಪ್ಪಿಸಿ, ತನ್ನ ಧರ್ಮಪತ್ನಿಯೊಡನೆ ತಪೋವನ ತರುವಿನ ನೆಳಲನ್ನು ಆಶ್ರಯಿಸಿದನು. ಮುಪ್ಪಿಗೆ ಬಂದ ನಾಕುಲದರಸರಿಗೆಲ್ಲ ಇದೇ ಮನತನದ ಸಂಪ್ರದಾಯ.

— ಇಂತು ರಘುರಾಜ್ಯಾಭಿಷೇಕವೆಂಬ ಮೂರನೆಯ ಅಧ್ಯಾಯಂ —

ಶ್ರೀಃ.

## ನಾಲ್ಕನೆಯ ಅಧ್ಯಾಯಂ.



ಸೂಚನೆ॥ ಒಡೆತನವ ಪಡೆದು ಪಿತನಿಂ
ಬಿಡದರಸರ ಗೆಲಿದು ತಂದ ನಾ ರಘು ಸಿರಿಯಂ।
ಪಡೆವುದು ಕೊಡುವುದಕೆನ್ನುತೆ
ತಡೆಯದೆ ಗೈದಂ ಸು ವಿಶ್ವ ಜಿತ್ಸವವ ನಹೋ! ॥

ಬಳಿಕ ರಘುವು - ತನ್ನ ತಂದೆಯು ಕೊಟ್ಟ ದೊರೆತನವನ್ನು ಪಡೆವನು, ಆಗ - ಸಂಜೆಯಲ್ಲಿ ಸೂರ್ಯನಿತ್ತ ತೇಜವನ್ನು ಪಡೆದುಕೊಂಡ ಅಗ್ನಿಯಂತೆ ಹೇರಳವಾಗಿ ಬೆಳಗುತ್ತಲಿದ್ದನು. ದಿಲೀಪನ ತರುವಾಯ ರಘುವು ರಾಜ್ಯದಲ್ಲಿ ನೆಲೆಗೊಂಡನೆಂಬ ಸುದ್ದಿಯು ನಾಡುಗಳೊಳಗೆಲ್ಲ ಹರಡಿತು, ಮುನ್ನರಸಿನ ಆಳ್ವಿಕೆಯಲ್ಲಿ ಹಗೆಗಳೆಗೆಯೊಳಗೆ ಹೊಗೆಯಾಡುತಲಿದ್ದ ಬೆಂಕಿಯು ಹೊತ್ತಿ ಉರಿಯುವಂತಾದುದು. ಅರಮನೆಯ ಮುಂದೆ ಧ್ವಜವನ್ನುನಟ್ಟು ಪೂಜಿಸಿ, ಕಾಲಕಾಲದಲ್ಲಿ ಮಳೆಗರೆಯಲೆಂದು ಇಂದ್ರನಿಗೆ ಹಬ್ಬವನ್ನು ಮಾಡುವುದುಂಟು. ದೇಶದ ಪ್ರಜೆಗಳೆಲ್ಲ ತಂತಮ್ಮ ಮಕ್ಕಳೊಡನೆ ಆ ಇಂದ್ರಧ್ವಜವನ್ನು ನೋಡುವಂತೆ, ರಘುವಿನ ಹೊಸದಾದ ಏಳಿಗೆಯನ್ನು ಕಣ್ಣೆತ್ತಿ ನೋಡುತ ಆನಂದಿಸುತ್ತಿದ್ದರು. ರಘುವು - ಅಭಿವೃದ್ಧಿಗೆ ಬಂದು, ಎಲ್ಲರ ಸಂತೋಷಕ್ಕೂ ಈಡಾದನು. ಆನೆಯಂತೆ ಅಂದವಾದ ನಡಗೆಯುಳ್ಳ ರಘುವು ತನ್ನ ತಂದೆಯ ಸಿಂಹಾಸನದಲ್ಲಿಯೂ, ಶತ್ರುಗಳ ರಾಜ್ಯದಲ್ಲಿಯೂ ಒಂದೇ ಸಮಯದೊಳಗೆ ಹಜ್ಜೆಯನ್ನೂರಿದನು. ಆ ರಘುವು ಸಾಮ್ರಾಜ್ಯದಲ್ಲಿ ಪಟ್ಟವನ್ನು ಕೈಗೊಂಡನಷ್ಟೆ? ಆಗ - ಸಿರಿಯು ಕಾಣಿಸಿಕೊಳ್ಳದಂತೆಯೇ ಛಾಯಾಮಂಡಲದಿಂದ ಊಹಿಸತಕ್ಕುದಾಗಿರುವ ತಾವರೆಯಂತಿರುವ ಕೊಡೆಯ ಕುರುಹಿನಿಂದ ಆತನನ್ನು ಸೇವಿಸಿದಳು, ಹೊಗಳುಭಟರು-ಆಗಾಗ ಅರಸನನ್ನು ಹೊಗಳತೊಡಗುತಲಿದ್ದರು. ಆ ಸಮಯದಲ್ಲಿ ಸರಸ್ವತಿಯೂ ಅವರಲ್ಲಿದ್ದು, ಅರ್ಥವನ್ನು ಅನುಸರಿಸುವ ನುತಿಗಳಿಂದ ತಾನೂ, ದೇವತಾಂಶನಾಗಿ

ಪೂಜ್ಯನೆನಿಸಿದ ಆತನನ್ನು ಸೇವಿಸುತ್ತಿದ್ದಳು. ಮನು ಮೊದಲ್ಗೊಂಡು ಹಲವುಮಂದಿ ಮಹಾರಾಜರು ಆ ಮಹಿಯನ್ನು ಅನುಭವಿಸಿದ್ದುದು ಬಿಟ್ಟ, ಆದರೂ ಆ ವಸುಮತಿಯು ರಘುವಿನ ವಿಷಯದಲ್ಲಿ ಹೆರರ ಕೈಹಿಡಿಯದವಳಂತೆ ಇರುತ್ತಿದ್ದಳು. ಅರಸು ದುರುಳರನ್ನು ದಂಡಿಸುತ್ತಲೂ ಸಾಧುಗಳನ್ನು ಮನ್ನಿಸುತ್ತಲೂ ಇದ್ದುದರಿಂದ, ಬಲುಬಿಸಿಯೂ ತನುವೂ ಅಲ್ಲದ ತೆಂಕಲ ಗಾಳಿಯಂತೆ ಎಲ್ಲರ ಮನವನ್ನೂ ಸೆಳೆಯುತಲಿದ್ದನು. ತಂದೆಗಿಂತಲೂ ಗುಣವಂತನಾದನು, ಮಾವಿನ ಹೂವು ಕಾಯಾಗಿ ಹಣ್ಣಾಗುತ ಬಂದಾಗ, ಹೂವಿನಲ್ಲಿ ಪ್ರೀತಿಯು ಕಡಮೆಯಾಗುತ ಬರುವಹಾಗೆ, ಪ್ರಜೆಗಳಿಗೆ ದಿಲೀಪನಲ್ಲಿ ಪ್ರೀತಿಯು ಹಳೆಯದಾಗುತ ಬಂದಿತು. (ಮುಂದಿನದು ಗುಣವುಳ್ಳುದಾದರೆ ಹಿಂದಿನದನ್ನು ಮರೆಯಿಸುವುದು) ಈ ಹೊಸದೊರೆಯು ಬಂದಬಳಿಕ ರಾಜನೀತಿಯನ್ನು ಚೆನ್ನಾಗಿ ಬಲ್ಲವರು ಧರ್ಮಾಧರ್ಮ ಯುದ್ಧಗಳ ಎರಡು ದಾರಿಗಳನ್ನೂ ತಿಳಿಸಿದರು. ಆದರೆ ಆತನಿಗೆ ಮೊದಲನೆಯದೇ ರುಚಿಸಿತು. ನೆಲ, ನೀರು, ಗಾಳಿ, ಬೆಳಕು, ಬೈಲುಗಳಲ್ಲಿನ-ಗಂಧ, ರುಚಿ, ಸ್ಪರ್ಶ, ತೇಜ, ಶಬ್ದ ಎಂಬ ಗುಣಗಳು ಹೆಚ್ಚಿಕೆಯನ್ನು ಪಡೆಯುತ್ತಿದ್ದುವು. ಇದರಿಂದ ದೊರೆಯು ಹೊಸಬನಾಗಲು, ಅವೂ ಹೊಸವಾದುವೆಂಬಂತೆ ಕಾಣಬಂದುವು. ಜನರಿಗೆ ಹರ್ಷಗೊಳಿಸುವುದರಿಂದ ಚಂದ್ರನಹಾಗೂ, ತಾಪಗೊಳಿಸುವುದರಿಂದ ತಪನನಹಾಗೂ, ಆ ರಾಜನೂ ತನ್ನ ಆಳ್ವಿಕೆಯಿಂದ ಪ್ರಜೆಗಳ ಮನವನ್ನು ಮೆಚ್ಚಿಸುತ ಬಂದುದರಿಂದ ಅರ್ಥಕ್ಕೆ ಸರಿಯಾದ ಹೆಸರುಳ್ಳವನಾದನು, ಆತನ ಕಣ್ಣುಗಳು ಕಿವಿಗಳವರಗೂ ಹರಡಿ, ಬಲು ಅಗಲವಾಗಿ ಅಂದವೆನಿಸಿಯೇ ಇದ್ದುವು, ಆದರೂ ಕೆಲಸಗಳ ನವುರನ್ನು ಕಾಣುವ ಕಾರ್ಯವು ಶಾಸ್ತ್ರಗಳಿಂದಲೇ ಆಗುತಲಿದ್ದಿತು. ಆ ಭೂಪತಿಯೊಡೆಯನು ಒಳನಾಡಿನ ಹಗೆಗಳನ್ನೆಲ್ಲ ಅಡಗಿಸಿದನು, ಪ್ರಜೆಗಳನ್ನೆಲ್ಲ ಮೆಚ್ಚಿಸಿದನು, ಆಳಿತವನ್ನೆಲ್ಲ ನೆಲೆಗೆ ತಂದನು, ಮನವು ಸಮಾಧಾನಕ್ಕೆ ಬಂದಿತು, ಅದುವರೆಗೆ ಕಮಲಧಾರಿಣಿಯಾಗಿ ಎರಡನೆಯ ರಾಜ್ಯಲಕ್ಷ್ಮಿಯು ಬರುವಂತೆ, ತಾವರೆಗೆ ಸುಗ್ಗಿಯಾಗಿರುವ ಆಶ್ವಯುಜ ಮಾಸವೂ ಬಂದಿತು. ಮಳೆಗಾಲದ ಮೋಡಗಳು ಚೆನ್ನಾಗಿ ಮಳೆಗರದು, ಹಗುರಗಳಾಗಿ ದಾರಿಕೊಟ್ಟುದರಿಂದ ಸೂರ್ಯನಬಿಸಿಲು ಎಲ್ಲೆಲ್ಲಿಯೂ ಹರಡಿ,

ತಾಳಲಾರದಂತಾಯಿತು, ರಘುರಾಜನ ಪ್ರತಾಪವು ಎಲ್ಲಕಡೆಗಳಲ್ಲಿಯೂ ವ್ಯಾಪಿಸಿ ತಡೆಯುದಹಾಗಾಯಿತು. ಮುಂಗಾರಿನ ಮುಗಿಲಿನಲ್ಲಿ ಮೂಡುವ ತನ್ನ ಬಿಲ್ಲನ್ನು ಇಂದ್ರನು ಎತ್ತಿಕೊಂಡನು, ರಘುವು ಹಗೆಗಳನ್ನು ಅಡಗಿಸಲು ಊಡಾಗಿರುವ ತನ್ನ ಚಾಪವನ್ನು ಕಯ್ಯಲ್ಲಿ ಹಿಡಿದನು, ಇಂದ್ರರಘುಗಳು - ಜನರಿಗೆ ಬೇಕಾದುದನ್ನೆಲ್ಲ ಅಣಿಮಾಡುವ ವಿಷಯದಲ್ಲಿ ಒಬ್ಬರಾದ ಮೇಲೊಬ್ಬರಂತೆ ಬಿಲ್ಲನ್ನು ಕೈಗೊಳ್ಳುವುದೇ ಕ್ರಮವಾಗಿದ್ದಿತು. ಬೆಳ್ಗೊಡೆಯೂ ಚಾಮರವೂ ಅರಸನಿಗೆ ತೊಡವಾಗಿರುವುದಷ್ಟೆ ? ಶರದೃತುವು ಬೆಳ್ದಾವರೆಯಿಂದಲೂ ಕಾಜಿಯ ಹೂವಿನಿಂದಲೂ ಸಿಂಗರಿಸಿಕೊಂಡು ಅರಸನನ್ನು ಅನುಸರಿಸಿತು, ಸಿರಿಯಲ್ಲಿ ವಿಡಂಬಿಸಲಾಗಲಿಲ್ಲ. ಕಳಕಳನೆ ಹೊಳೆಯುತಲಿರುವ ಚಂದಿರನಂ ಕಂಡು ಸಂತಸಂಗೊಂಬಂತೆ ಅವಗಮುಂ ನಗೆಮೊಗದಿಂದಿರುವ ಆ ತಿರೆಯಾಣ್ಮನಂ ಕಾಣುವ ಪ್ರಜೆಗಳಿಗೆಲ್ಲ ಪ್ರೀತಿಯು ಹೆಚ್ಚುತಲಿದ್ದಿತು. ಅಂಚೆಗಳ ಹಿಂಡುಗಳೊಳಗೂ, ತಾರೆಗಳೊಳಗೂ, ಕುಮುದಗಳನ್ನೊಳಗೊಂಡಿರುವ ಕೊಳಗಳೊಳಗೂ, ಆತನ ಯಶೋರಾಶಿಯು ಹರಡಿದಂತಿದ್ದಿತು. ಕಬ್ಬಿನತೋಟದ ನೆಳಲಿನಲ್ಲಿ ಕುಳಿತು, ಹಕ್ಕಿ ಮೊದಲಾದವುಗಳ ಕಾಟವಿಲ್ಲದಂತ ಗದ್ದೆಗಳನ್ನು ಕಾಯುತಲಿರುವ ಹೆಂಗಸರು ಚಿಕ್ಕಂದು ಮೊದಲು ಅಂದಿನವರೆಗೂ ನಡೆದ ರಘುಚರಿತ್ರೆಯನ್ನು ಹಾಡುಗಳನ್ನಾಗಿ ಹೇಳಿಕೊಳ್ಳುತ ನಲಿಯುತಲಿರುವರು. ಹೀಗಿರುವಲ್ಲಿ ತೆಂಕಣ ದೆಸೆಯ ಮುಗಿಲಿನೊಳಗೆ ಅಗಸ್ತ್ಯನಕ್ಷತ್ರವು ಮೂಡಿತು, ಕೆರೆತೊರೆಗಳ ನೀರೆಲ್ಲ ತಿಳಿಯಾಗುತ ಬಂದಿತು, ರಘುವಿನ ಏಳಿಗೆಯು ಕುಂದಲೆಂದೆಣಿಸುವ ಹಗೆಗಳ ಎದೆಯು ತಲ್ಲಣಿಸಿಬಂಡಾಯಿತು. ತೋರವಾದ ಹಿಳಲುಗಳನ್ನೊಳಗೊಂಡಿರುವ ದೊಡ್ಡಗೂಳಿಗಳು ಹೊಳೆಗಳ ದಡಗಳನ್ನು ಗುಟಾಡುತ, ಕಾಳಗದಲ್ಲಿ ರಘುವು ಹಗೆಗಳನ್ನಿರಿಯುವ ಲೀಲೆಯ ಪರಿಯನ್ನು ತೋರುತಲಿದ್ದುವು. ಋತುಧರ್ಮದಿಂದ ಏಳೆಲೆಯ ಬಾಳೆಗಳೊಳಗೆ ಹೂಗಳು ಕಾಣಿಸಿದುವು, ಗಾಳಿಯು ಅವುಗಳೊಳಗಣ ಧೂಳಿಯನ್ನು ತಂದು, ಆನೆಗಳಮೇಲೆ ಎರಚಿತು, ಆನೆಗಳಿಗೆ ಇದಿರಾನೆಗಳು ಬಂದುವೆಂದು ಹೊಟ್ಟೆಯಕಿಚ್ಚು ಹೆಚ್ಚಿದಂತಾಯಿತು, ಮದವೇರಿತು, ತಮ್ಮ ಮೈಗಳೊಳಗ ಏಳವಯವಗಳಿಂದ ಮದಜಲಧಾರೆಯನ್ನು ಕರೆದುವು, ಪಾಳೆಗಾಲವೆಲ್ಲ ಕಳೆಯಿತು,

ಹೊಳೆಗಳು ಹೆಚ್ಚಿ ಹರಿಯುವುದು ತಗ್ಗಿತು, ನಡಗೆಯಿಂದ ದಾಟಿಹೋಗಲು ತಕ್ಕುವಾದುವು, ಕಾಲುದಾರಿಗಳ ಕೆಸರೆಲ್ಲ ಒಣಗಿತು, ಉತ್ಸಾಹಶಕ್ತಿಯು ರಾಜನನ್ನು ದಿಗ್ವಿಜಯಕ್ಕೆ ಹೊರಡುವಂತೆ ಪ್ರೇರಿಸುವುದಕಿಂತ ಮೊದಲೇ ಶರತ್ಕಾಲವು ಯಾತ್ರೆಗೆ ಎಚ್ಚರಿಸಿತು.

ಅರಸು - ಹಗೆಗಳಮೇಲೆ ದಂಡೆತ್ತಿ ಹೋಗುವ ಸಮಯ ಪ್ರಾಪ್ತಿಗಿತೆಂದು ಅರಿತು, ಆನೆ ಕುದುರೆ ಮೊದಲಾದವುಗಳಿಗೆ ಆರತಿಮಾಡುವ ಹಬ್ಬವನ್ನು ನಡೆಸಿದನು, ಆಗ - ಅಗ್ನಿ ಪ್ರತಿಷ್ಠೆಮಾಡಿ ಕಟ್ಟಲೆಯಂತೆ ಹವನಮಾಡಿದನು, ಅಗ್ನಿಯಿಂದ ಉರಿಯು ಬಲವೊಗನಾಗಿ ಸುತ್ತಿ, ಮೇಲಕ್ಕೆ ಬರುತಲಿದ್ದಿತು, ಇದರಿಂದ ಅಗ್ನಿಯು ಅರಸನಿಗೆ ಕಯ್ಯೆತ್ತಿ ಜಯವನ್ನು ಕೊಡುವಂತೆ ಕಂಗೊಳಸುತಲಿದ್ದಿತು. ಬಳಿಕ ಮೊಟ್ಟ ಮೊದಲು ಒಳನಾಡಿಗೆ ಹೋಕುಬಾರದಂತೆ ಭದ್ರಪಡಿಸಿದನು, ಕೋಟೆಗೆ ಸರಿಯಾದ ಕಾವಲಿಟ್ಟನು, ಬೆಂಗಡೆಯ ನಾಡುಗಳ ಹಾವಳಿಯಿಲ್ಲದಹಾಗೆ ಅಣಿಮಾಡಿದನು, ಆಮೇಲೆ ಶುಭಕರ್ಮಗಳನ್ನು ಆಚರಿಸಿ, ಶಕುನ ಮುಂತಾದವುಗಳನ್ನು ನೋಡಿಕೊಂಡು, ರಾಜನು ದಿಗ್ವಿಜಯವನ್ನು ಬಯಸಿ ಹೊರಟನು. ರಾಜಬೀದಿಯಲ್ಲಿ ಬರುತಲಿರುವಾಗ ಊರ ಮುತ್ತೈದೆಯರು ವಾಡಿಕೆಯನ್ನನುಸರಿಸಿ ಎರಚುತಲಿರುವ ಅರಳು ಅರಸನ ಶಿರದ ಮೇಲೆ ಬೀಳುತಲಿದ್ದುದು. ಹಿಂದೆ-ಬಿಡುಗಣ್ಣರೂ ರಕ್ಕಸರೂ ಪಾಲ್ಗಡಲನ್ನು ಕಡೆವಾಗ ಮಂದರ ಪರ್ವತದಿಂದ ಮೇಲಕ್ಕೆ ಹಾರಿದ ತೆರೆಗಳ ತುಂತುರುಗಳು ಪಕ್ಕದಲ್ಲಿ ಪವಳಿಸಿರುವ ನಾರಾಯಣನಮೇಲೆ ಬೀಳುವಂತಿದ್ದಿತು.

ಬಿಡುಗಣ್ಣರೊಡೆಯನಿಗೆಣೆಯೆನಿಸಿದ ಪ್ರೌಢವಿಯಾಣ್ಮನು ಮೊದಲು ಮೂಡಲಕಡೆಗೆ ಪಯಣಮಾಡಿದನು. ದಂಡಿನಾಳುಗಳು ದಾಳಗಳನ್ನು ಎತ್ತಿ ಹಿಡಿದಿದ್ದರು, ಗಾಳಿಯಿಂದ ಅಲುಗುವ ತುದಿಯ ಬಟ್ಟೆಗಳು ಹಗೆಗಳನ್ನು ಬೆದರಿಸುವಂತೆ ಬೆಳಗುತಲಿದ್ದುವು. ತಿರೆಯಾಣ್ಮನ ಪೌರುಷದ ಹೆಸರುವಾಸಿಯು ಮುಂದರಿಯಿತು, ದಂಡಿನ ಕೋಲಾಹಲವು ಅದರಹಿಂದೆ ಹೊರಟಿತು, ಸೇನೆಯ ಧೂಳಿಯು ಅದನ್ನು ಹಿಂಬಾಲಿಸಿತು, ಚತುರಂಗದ ಪಡೆಯು ಅದನ್ನು ಹಿಂದಟ್ಟಿತು, ಇಂತು ಆ ಸೈನ್ಯವು - ನಾಲ್ಕು ಹೆಗಲುಳ್ಳುದರಂತೆ, ಇಲ್ಲವೆ ನಾಲ್ಮೊಗವ ರಚನೆಯುಳ್ಳುದರಹಾಗೆ

ನಡೆಯುತಲಿದ್ದಿತು. ಒಡೆಯನಾಣತಿಯಿಂದ ಮರುಭೂಮಿಗಳೆಲ್ಲ ಜಲಭೂಮಿಗಳಾದುವು, ಹಡಗಿಂದ ದಾಟತಕ್ಕ ಹೊಳೆಗಳೆಲ್ಲ ಕಾಲ್ನಡೆಯಿಂದ ಸುಲಭವಾಗಿ ದಾಟಲಣಿಯಾದುವು, ಕಾಡುಬೀಡುಗಳೆಲ್ಲ ಅಂದವಾದ ಬೀದಿಗಳಾದುವು, ರಘುವು ದೊಡ್ಡ ದಂಡನ್ನು ಮೂಡಲ ಕಡಲಕಡೆಗೆ ಕರದೊಯ್ಯುತಲಿದ್ದನು, ಹರನ ಶಿಂದಿಂದಿಳಿದ ಬಾಂದೊರೆಯನ್ನು ಕೊಂಡುಹೋಗುತಲಿದ್ದ ಭಗೀರಥನಂತೆ ಕಂಗೊಳಸಿದನು. ಅಲ್ಲಲ್ಲಿ ಅರಸರಿಗೆ ಬರುತಲಿದ್ದ ಆಯುವೆಲ್ಲ ಅಡಗಿತು, ಬವರದಲ್ಲಿ ಸೋತುದರಿಂದ ತಾವುತಪ್ಪಿದಂತಾಯ್ತು, ರಾಯನ ದಾರಿಗೆ ಅಡ್ಡಿಯೇ ಇಲ್ಲವಾಯಿತು. ಹೂವು, ಹಣ್ಣುಗಳನ್ನೆಲ್ಲ ಉದುರಿಸಿ. ಕೊನೆಕೊಂಬುಗಳನ್ನೆಲ್ಲ ಮುರಿದು, ಮರಗಿಡಬಳ್ಳಿಗಳನ್ನು ಬುಡಸಹಿತ ಕಿತ್ತೆಸೆದು, ಇದಿರಿಲ್ಲದೆ ಬರುವ ಆನೆಯ ಹಾದಿಯಂತಾಯ್ತು. ಗೆಲ್ಲಾಳಾದ ಇಳೆಯಾಣ್ಮನು ಇಂತು ಮೂಡಣದೆಸೆಯ ಅರಸರ ನಾಡುಗಳನ್ನೆಲ್ಲ ವಶಪಡಿಸಿಕೊಂಡು, ಓಲೆಯಮರಗಳ ತೋಪುಗಳಿಂದ ಕಪ್ಪಗೆ ಕಾಣಬರುವ ಕಡಲತಡಿಗೆ ಬಂದು ಸೇರಿದನು, ಅಲ್ಲಿಯೇ ಸುಹ್ಮದೇಶ, ತೊರೆಯ ಅಂಗಳದಲ್ಲಿ ಬೆಳದಿರುವ ಹುಲ್ಲು- ಹೊಳೆಯ ಹೆಚ್ಚಿ ಹರಿವಾಗ ತಲೆಯನ್ನು ತಗ್ಗಿಸಿದ್ದು, ತನ್ನನ್ನು ಕಾಪಾಡಿಕೊಳ್ಳುವಂತೆ, ಅಲ್ಲಿಯ ದೊರೆಗಳೂ-ರಘುವಿಗೆ ಆ ತೃಣವಂತೆ ವಿಧೇಯರಾಗಿ ಪ್ರಾಣಗಳನ್ನು ಉಳಿಸಿಕೊಂಡರು. ಅವನಿಪಾಲನು-ಅಡಗದಿರುವವರನ್ನೆಲ್ಲ ಅಡಗಿಸತಕ್ಕವನು, ವಂಗದೇಶದ ದೊರೆಗಳು ಹಡಗಿನ ಬಲವನ್ನು ಕಟ್ಟಿಕೊಂಡು ಇದಿರುಬಿದ್ದರು, ಅವರ ಬೇರನ್ನು ಶೌರ್ಯದಿಂದ ಸಡಲಿಸಿದನು, ಗೆಲುವು ಕೈಗೂಡಿದುದು, ಗಂಗಾನದಿಯ ನಡುವಣ ದ್ವೀಪಗಳಲ್ಲಿ ಜಯದ ಕುರುಹಿನ ಕಂಬಗಳನ್ನು ನಡಿಸಿದನು. ಬಿಟ್ಟುಹುಯ್ದಿದ್ದು, ಕಿತ್ತು, ಮರಳಿ ನಟ್ಟಪೈರು ಹೊಗವಾಗಿ ಬೆಳೆದು ಬಾಗಿ, ಹುಲುಸಾದ ಬೆಳೆಯನ್ನು ಕೊಡುವುದು ವಾಡಿಕೆ; ರಘುವು - ವಂಗದೇಶೀಯರನ್ನು ಸ್ಥಲ ತಪ್ಪಿಸಿದಂತೆ ಮಾಡಿ, ಮರಳಿ ಅಲ್ಲಿಯೇ ನಿಲ್ಲಿಸಿದನು. ಅವರು ಸಂತಸದಿಂದುಬ್ಬಿ, ರಘುವಿನ ಅಡಿದಾವರೆಗಳವರೆಗೂ ತಗ್ಗಿ, ತಕ್ಕ ಕಾಣಿಕೆಗಳನ್ನೊಪ್ಪಿಸಿ ಗೌರವಿಸಿದರು. ಅಲ್ಲಿಂದ ಮುಂದೆ - ಕಪಿಶಾನದಿಯೊಳಗೆ ಆನೆಗಳನ್ನು ಸೇತುವೆಯಂತೆ ಸಾಲಾಗಿ ನಿಲ್ಲಿಸಿ, ಬಲದೊಡನೆ ಹೊಳೆಯನ್ನು ದಾಟಿದನು, ವಶರಾದ ಉತ್ಕಲರಿಂದ ದಾರಿಯನ್ನರಿತು, ಕಲಿಂಗ ದೇಶಕ್ಕೆ

ಇದಿರಾಗಿ ಬಿಜಯಂಗೈದನು. ಅಲ್ಲಿ - ಗಂಭೀರವೇದಿಯೆಂಬ ಆನೆಯ ಶಿರದಮೇಲೆ ಮಾವಟಿಗನು ಮೊನೆಯಾದ ಅಂಕುಶವನ್ನಿಡುವಂತೆ, ರಘುವು ಮಹೇಂದ್ರಪರ್ವತದಲ್ಲಿನ ಅರಸರಮೇಲೆ ತನ್ನ ಪ್ರತಾಪವನ್ನು ತೋರಿದನು. ಹಿಂದೆ ರಕ್ಕೆಗಳನ್ನೊಕ್ಕಲಿಕ್ಕಲುಜ್ಜುಗಿಸಿದ ಇಂದ್ರನನ್ನು ಕಲ್ಮಳೆಗರೆಯುತ ಇದಿರ್ಗೊಂಡ ದೊಡ್ಡ ಬೆಟ್ಟದಂತೆ, ಆನೆಯಬಲವುಳ್ಳ ಕಾಳಿಂಗನು ಅಂಬುಗಳನ್ನಿಡುತ ರಘುವನ್ನಿದಿರ್ಗೊಂಡನು. ಬಳಿಕ - ಕಾಕುತ್ಸ್ಥನು ಹಗೆಗಳ ಬಾಣದ ಮಳೆಯಲ್ಲಿ ಮುಳುಗಿ, ಸೈರಿಸಿ, ಯಾಗದಲ್ಲಿ ಮಂಗಳಸ್ನಾನ ಮಾಡಿದವನಂತೆ, ಜಯಲಕ್ಷ್ಮಿಯ ಕೈಹಿಡಿದನು. ಅದುವರೆಗೆ ದಂಡಿನ ವೀರರೆಲ್ಲ ಬಳಲಿದ್ದರು. ಮಹೇಂದ್ರಪರ್ವತದಲ್ಲಿ ಬೀಡುಬಿಟ್ಟು, ಎಡೆಗೊಂಡು, ಹಗೆಗಳ ಹೆಸರುವಾಸಿಯನ್ನು ಹೀರಿದಂತೆ, ವೀಳೆಯದೆಲೆಯ ದೊನ್ನೆಗಳಿಂದ ತೆಂಗಿನ ಹೆಂಡವನ್ನು ಕುಡಿದು ತಣಿದರು. ಧರ್ಮಕಾರ್ಯಕ್ಕೋಸುಗವೇ ದಿಗ್ವಿಜಯಮಂ ಬಳಸುತಲಿರುವ ರಘುವು ಮಹೇಂದ್ರನಾಥನ ಸಿರಿಯನ್ನು ಮಾತ್ರವೇ ಕಸುಗೊಂಡನಲ್ಲದೆ ಧರೆಯನ್ನಲ್ಲ, ಕೈಸೆರೆಹಿಡಿದಿದ್ದು ಕಪ್ಪವನ್ನೊಪ್ಪಿಸುವ ಅರಸನನ್ನಾಗಿ ಅಲ್ಲಿಯೇ ನೆಲೆಗೊಳಿಸಿದನು.

ಇಂತು ರಾಘುರಾಜನಿಗೆ ಪೂರ್ವದಲ್ಲಿ ಅಪೂರ್ವ ದಿಗ್ವಿಜಯವಾಯಿತು. ಕಡಲಿನ ದಡದ ದಾರಿಯುದ್ದಕ್ಕೂ ಹೊಂಬಾಳೆಯ ಬೆಳೆಯಿಂದ ತುಂಬಿದ ಅಡಕೆಯ ಗಿಡಗಳಸಾಲು ಕಂಗೊಳಿಸುತಲಿದ್ದಿತು. ಆ ಹಾದಿಯಿಂದಲೇ, ಬಯಸದೆಯೇ ಬರುತಲಿರುವ ಜಯಲಕ್ಷ್ಮಿಯೊಂದಿಗೆ ಅಗಸ್ತ್ಯಮುನಿಗಾಸರೆಯೆನಿಸಿದ ತೆಂಕಲದೆಸೆಗೆ ತಿರುಗಿದನು. ಸಮೀಪದಲ್ಲಿ ಕಾವೇರಿಯು ಕಾಣಬಂದಿತು, ಮದವೇರಿದ ಆನೆಗಳೆಲ್ಲ ಮಜ್ಜನಸುಖವನ್ನನುಭವಿಸಿದುವು, ಸೈನಿಕರೆಲ್ಲ ಸ್ನಾನಪಾನಾದಿಗಳನ್ನಾಚರಿಸಿದರು, ಹೀಗೆ ಅಲ್ಲಿ ವಿಶ್ರಮಿಸಿಕೊಂಡು, ಮುಂದಕ್ಕೆ ಪಯಣವನ್ನು ಬೆಳಸಿದರು. ಜಯಶಾಲಿಯಾದ ರಘುವು ದಂಡಿನೊಡನೆ ಹಾದಿಯನ್ನು ದಾಟಿ, ಮಲಯಪರ್ವತದ ತಪ್ಪಲಿನ ವಿಸ್ತಾರವಾದ ಮೆಣಸಿನ ತೋಟಗಳಲ್ಲಿ ಬಂದಿಳಿದನು. ಸೈನಿಕರ ಹಾವಳಿಯಿಂದ ಅಲ್ಲಿ ನೆಲೆಗೊಂಡಿದ್ದ ಕಾರಂಡವ ಪಕ್ಷಿಗಳೆಲ್ಲ ಹಾರಿಹೋದುವು. ಮತ್ತು ಹೇರಳವಾಗಿದ್ದ ಏಲಕ್ಕಿಯ ತೋಟಗಳನ್ನೆಲ್ಲ ಕುದುರೆಗಳು ತುಳಿಯಲು, ಕಾಯಿಗಳ ಧೂಳಿಯು -

ಸಮಾನವಾದ ವಾಸನೆಯುಳ್ಳ ಮದದಾನೆಗಳ ಮದಜಲದಿಂದ ತುಂಬಿದ ಕಪ್ರೋಲಗಳಲ್ಲಿ ಮೆರೆಯಿತು. ಮಲಯಾದ್ರಿಯು ಬುಡದಲ್ಲಿ ಗಂಧದ ಮರಗಳು ತುಂಬಿದ್ದುವು. ಆ ಗಿಡಗಳ ತಾಳುಗಳಲ್ಲಿ ಸರ್ಪಗಳು ನಿತ್ಯವೂ ಸುತ್ತಿಕೊಳ್ಳುತ್ತಲಿದ್ದುದರಿಂದ, ನಿಲುವಿನ ಸುತ್ತಲೂ ಮರಗಳು ಕಡೆದಂತಾಗಿದ್ದುವು, ಆ ಮರಗಳಲ್ಲಿಯೇ ದಂಡಿನ ಆನೆಗಳನ್ನು ಕಟ್ಟಿದ್ದರು, ಅದರಿಂದಲೇ ಗಜಗಳ ಹಿಂಗಟ್ಟುಗಳು ಸರಿದರೂ ಮುಂಗಟ್ಟುಗಳು ಸರಿಯಲಿಲ್ಲ. ದಕ್ಷಿಣ ದಿಕ್ಕಿಗೆ ತೆರಳಿದಾಗ ರವಿಗೂ ತಾಪವು ತಗ್ಗುವುದು, ಆದರೆ-ದಕ್ಷಿಣ ದಿಕ್ಕಿನಲ್ಲಿ ಪಾಂಡುದೇಶದ ಅರಸರು ರಘುರಾಜನ ಪ್ರತಾಪವನ್ನು ತಾಳಲಾರದೆ ಹೋದರು, ಅದರಿಂದಲೇ ತಾಮ್ರಪರ್ಣೀನದಿಯ ಸಂಗಮಸ್ಥಳದಲ್ಲಿ ಕಡಲಿನೊಳಗಿನಿಂದ ಎತ್ತಿ ಇಟ್ಟಿದ್ದ ಸಾರತರವಾದ ಮುತ್ತುಗಳನ್ನು ಆತನಿಗೆ ಶರಣಾಗತರಾಗಿ ಒಪ್ಪಿಸಿದುದು- ತಾವು ಗಳಿಸಿದ್ದ ಯಶಸ್ಸನ್ನೊಪ್ಪಿಸುವಂತಿದ್ದಿತು. ಬಳಿಕ ಧೀರನಾದ ದೊರೆಯು - ಚಂದನತರುಗಳಿಂದ ತುಂಬಿ, ತೆಂಕಲದೆಸೆಗೆ ಅಲಂಕಾರವಾಗಿದ ಮಲಯದುರ್ದುರಗಳೆಂಬ ಬೆಟ್ಟಗಳಲ್ಲಿ ಸುಖವಾಗಿ ತಂಗಿದ್ದು, ಕಡಲಿಗೆ ಸ್ವಲ್ಪ ದೂರದಲ್ಲಿರುವ ಭೂಮಿಯ ಬೈಲನ್ನು ದಾಟಿದನು. ಪಡೆಯು-ಪಡುವಣ ದೆಸೆಯ ಅರಸರನ್ನು ಗೆಲ್ಲಬೇಕೆಂಬ ಹುರುಡಿನಿಂದ ಹರಡಿ ನಡೆಯುತ್ತಲಿದ್ದಿತು. ಮುನ್ನು ಪರಶುರಾಮನು - ಅಂಬನ್ನೆಸೆದು ಕಡಲನ್ನು ದೂರಸರಿಯುವಂತೆಸಗಿದ್ದರೂ, ಮರಳಿ ಸಹ್ಯಪರ್ವತದ ತಡಿಗೈದಿತೆಂಬಂತಿದ್ದಿತು. ದಂಡು ಮುತ್ತಿದೊಡನೆಯೇ ಕೇರಳ ದೇಶದರಸರು - ತಲೆತಪ್ಪಿಸಿಕೊಂಡು ಪಲಾಯನವಾದರು, ಅರಸಿತಿಯರು-ಅಂದವಾದ ಉಡಿಗೆತೊಡಿಗೆಗಳನ್ನೆಲ್ಲ ಕಳಚಿಬಿಟ್ಟರು, ಸೇನೆಯ ತುಳಿತದಿಂದೆದ್ದ ರಜವು-ಅವರ ಬೈತಲೆಯ ಬಳಿಯಣ ಹಣೆಗಳಲ್ಲಿ ಕುಂಕುಮಚೂರ್ಣದಂತೆ ಸಿಂಗರಿಸಿತು. ಅಲ್ಲಿಗೆ ಹತ್ತಿರದಲ್ಲಿ ಹರಿಯುತಲಿದ್ದ ಮುರಳಾನದಿಯ ಮೇಲಣ ತಂಗಾಳಿಯು - ಹೊಳೆಯ ಇಕ್ಕೆಲದ ಗೇದಗೆಗಳಮೇಲೆ ಬೀಸುತ್ತಲಿದ್ದಿತು, ಹೂಗಳಿಂದೆದ್ದ ರಜವು ಸೈನಿಕರ ಉಡಿಗೆಗಳಲ್ಲಿ ಬಿದ್ದು, ಉಜ್ಜುಗಿಸದೆಯೇ ಸಜ್ಜುಗೊಂಡ ಗಂಧುಡಿಯಾಯಿತು. ಪಡೆಯ ವಾಜಿಗಳ ನಡಗೆಯಲ್ಲಿ ಜೀನು ಮೊದಲಾದವುಗಳಿಂದ ಹೇರಳವಾಗಿ ಮುರಮುರನೆಂಬ ಸದ್ದಾಗುತಲಿದ್ದಿತು, ಆಗ-

ಆ ಪ್ರಾಂತದ ತಾಳೆಯ ಮರಗಳಲ್ಲಿ ಗಾಳಿಯು ಹೊಡೆತದಿಂದುಂಟಾಗುತ್ತಲಿರುವ ಎಲೆಗಳ ಗಲಗಲ ಶಬ್ದವು ಕೇಳಬರಲೇ ಇಲ್ಲ. ಖರ್ಜೂರದ ಗಿಡಗಳ ತಾಳುಗಳಲ್ಲಿ ಮದವೇರಿದ ಆನೆಗಳನ್ನು ಕಟ್ಟಿದ್ದರು. ಅವುಗಳ ಕಪೋಲಗಳು ಮದಜಲದ ಹರಿತದಿಂದ ಸುವಾಸನೆಯಾಗಿದ್ದುವು. ಇಕ್ಕೆಲಗಳಲ್ಲಿ ಬೆಳೆದಿದ್ದ ಸುರಹೊನ್ನೆಯ ಹೂಗಳನ್ನು ತೊರೆದು ದುಂಬಿಗಳು ಆನೆಗಳ ಗಲ್ಲಗಳಲ್ಲಿ ಬಂದಿಳಿದುವು. ಪಡುವಣ ಕಡಲ ತಡಿಯ ನಾಡುಗಳರಸರು - ಕಾಳಗಕ್ಕೆಳಸದೆ ಕಾಣಿಕೆಗಳನ್ನೊಪ್ಪಿಸಿ ರಘುರಾಜನಿಗೆ ಅಡಿಯಾಳುಗಳಾದರು, ಹಿಂದೆ ಜಮದಗ್ನಿ ಕುಮಾರನು ತಪಸಂಗೆಯ್ಯಲು ಬೇಡಿಕೊಂಡುದರಿಂದ ತಾವನ್ನು ಕೊಟ್ಟ ಕಡಲು - ಈಗ, ತಾನೂ ಒಬ್ಬ ಅರಸನೆಂದು ಅಧೀನವಾಗಿ ಕಪ್ಪವನ್ನೊಪ್ಪಿಸುವಂತಿದ್ದಿತು. ಆಗ - ರಘುರಾಜನ ಪಡೆಯೊಳಿದ್ದ ಮದವೇರಿದ ಆನೆಗಳು - ಅಲ್ಲಿರುವ ತ್ರಿಕೂಟ ಪರ್ವತದ ದೊಡ್ಡ ಬಂಡೆಗಳನ್ನು ಕೊಂಬುಗಳಿಂದ ತಿವಿದು ಗೂಟಾಡಿದುವು. ಅಲ್ಲಲ್ಲಿ ಕಲ್ಲಿನ ಚಕ್ಕೆಗಳೆದ್ದು ಗುರುತಾಯಿತು. ಅದರಿಂದ ರಘುವು - ನಾನಾನಾಡುಗಳನ್ನು ಜಯಿಸಿದುದಕ್ಕೆ ತ್ರಿಕೂಟವನ್ನೇ ತನ್ನ ಪೌರುಷದ ಪರಿಯನ್ನು ಸೂಚಿಸುವ ವರ್ಣಾವಳಿಯನ್ನು ಕೆತ್ತಿಸಿದ ಎತ್ತರವಾದ ಜಯಸ್ತಂಭವನ್ನಾಗಿ ಎಸಗಿದನು.

ಆ ಬಳಿಕ ಯೋಗಿಯು - ತತ್ವಜ್ಞಾನದಿಂದ ಇಂದ್ರಿಯಗಳೆಂಬ ಹಗೆಗಳನ್ನು ಗೆಲ್ಲುವಹಾಗೆ, ರಘುವು - ಪಾರಸೀ ದೇಶದ ಅರಸನನ್ನು ಜಯಿಸಬೇಕೆಂದು ಬಯಸಿದನು ; ಆದರೆ - ಹಡಗಿನಿಂದ ಕಡಲಮೇಲಣ ಹಾದಿಯಿಂದಲೇ ಹೊರಟನು. ರಘುವು - ಯವನರಾಜರರಸಿಯರ ಮೊಗದಾವರೆಗಳಲ್ಲಿ ಮಧುಸೇವನೆಯಿಂದುಂಟಾಗಿದ್ದ ಮದರಾಗವನ್ನು ಸಹಿಸದೆ ಹೋದುದು, ಅಕಾಲದಲ್ಲಿ ಮುಗಿಲೊಳಗ ಮೂಡಿದ ಮೋಡವು-ತಾವರೆಗಳಿಗಾಗುವ ಎಳಬಿಸಿಲನ್ನು ತಾಳಲಾರದಂತಿದ್ದಿತು. ಪಡುವಣ ನಾಡುಗಳ ಯವನರು - ಕುದುರೆಗಳ ಬಲವನ್ನೊಳಗೊಂಡು ರಘುವನ್ನಿದಿರಿಸಿದರು. ಇವರೊಡನೆ ನಡೆದ ದೊಂಬಿಯು ಕಾಳಗದ ಧೂಳಿಯಲ್ಲಿ ಕೊಂಬಿನ ಕೂಗಿನಿಂದಲೋ, ಬಿಲ್ಲಿನ ಟಂಕಾರದಿಂದಲೋ, ಇದಿರಾಳನ್ನು ಅರಿಯಬೇಕಾಗಿದ್ದಿತು. ರಘುವು -ಯವನರ ಶಿರಗಳನ್ನೆಲ್ಲ ತರಿದು ಬಡದ

ತಿರೆಯುಮೇಲೆ ಹರಡಿ ಬಿಟ್ಟಿದನು. ರೋಮಗಳ ಬೆಳವಳಿಗೆಯಿಂದ ತುಂಬಿದ ಅವರ ತಲೆಬುರುಡೆಗಳು-ನೊಣಗಳಿಂದ ತುಂಬಿದ ಜೇನುಕೊಡ ಗಳಂತೆ ಕಾಣಬರುತಲಿದ್ದುವು. ಕಾಳಗದೊಳಗೆ ಕಳೆದುಳಿದ ಯವನರು - ತಲೆಪಾಗುಗಳನ್ನು ತೆಗೆದು ಅರಸಿಗೆ ಮರೆಹೊಕ್ಕರು, ಮಹಾತ್ಮರ ಸಿಟ್ಟು-ಇದಿರಾಳು ತಗ್ಗುವವರೆಗೆ ಮಾತ್ರವೇ ಇರತಕ್ಕುದು, ಅಥವಾ ಮಹಸೀಯರ ರೋಷಕ್ಕೆ ಇದಿರಾಳು ತಗ್ಗೋಣವೇ ಮುಯ್ಯಲ್ಲವೆ ?

ತರುವಾಯ ದ್ರಾಕ್ಷೆಯ ಚಪ್ಪರಗಳ ಅಡಿಯಲ್ಲಿ ಕೃಷ್ಣಾಜಿನಗಳನ್ನು ಹರಡಿ ಕುಳಿತು, ದ್ರಾಕ್ಷಾರಸಗಳನ್ನು ಪಾನಮಾಡಿ, ತಣಿದು, ರಘುಸೈನಿಕರು ಕಾಳಗದ ಬಳಲಿಕೆಯನ್ನು ಕಳೆದರು.

ಬಳಿಕ - ಬೆಂಗದಿರನು ಬಡಗಣದೆಸೆಗೆ ಬಂದಾಗ ತನ್ನ ತೇಜದಿಂದ ನೆಲದಲ್ಲಿನ ನೀರನ್ನು ಹೀರುವಹಾಗೆ, ತನ್ನ ಅಂಬುಗಳಿಂದ ಹಗೆಗಳ ಉಸಿರನ್ನು ಸೆಳೆಯಲು ರಘುವು ಕುಬೇರನಾಶೆಗೆ ತಿರುಗಿ, ಸಿಂಧುನದಿಯ ತಡಿಗೆ ಬಂದು, ಕುಂಕುಮಕೇಸರದ ತೋಟದಲ್ಲಿ ತಂಗಿದನು, ದಳದ ಹಯಗಳು ನೆಲದಲ್ಲಿ ಉರುಳಾಡಿ ಕೇಸರದಿಂದ ತುಂಬಿದ ಹೆಗ್ಗತ್ತುಗಳನ್ನು ಒದರಿ ಮಾರ್ಗಾಯಾಸವನ್ನು ಪರಿಹರಿಸಿಕೊಂಡುವು. ಆಮೇಲೆ-ರಘುರಾಜನು ಹೂಣದೊರೆಗಳಲ್ಲಿ ತೋರಿದ ಹೇರಳವಾದ ಪೌರುಷವು - ಅವರ ಹೆಂಡಿರುಗಳ ಕೆನ್ನೆಗಳಲ್ಲಿನ ಕೆಂಪುಬಣ್ಣಕ್ಕೆ ಗುರುವಾಯಿತು. ಕಾಂಬೋಜದೇಶದ ಅರಸರು - ಸಮರದಲ್ಲಿ ರಘುವಿನ ಶೌರ್ಯವನ್ನು ತಾಳಲಾರದೆ ತಮ್ಮ ಆನೆಗಳನ್ನು ಬಿಗಿದಿದ್ದ ಅಂಕೋಲೆಯ ಗಿಡಗಳೊಂದಿಗೆ ತಾವೂ ಶಿರಬಾಗಿದರು.

ಆ ಹಿಂದೆ - ಮುಕ್ಕಣ್ಣನರಸಿಗೆ ತವರುಮನೆಯಾದ ಹಿಮಗಿರಿಯನ್ನು ವಾಜಿಗಳ ಊಡಿಸಿಂದ ಏರಿದನು, ತೇಜಿಗಳ ತುಳಿತದಿಂದೆದ್ದ ರಜದಿಂದ ಬೆಟ್ಟದ ಕೋಡನ್ನು ಬೆಳೆಯಿಸುವನೆಂಬಂತೆ ಕಂಗೊಳಿಸಿದನು, ಧರಾಧರವನ್ನೇರುವಾಗ ದಳದ ಕೋಲಾಹಲವು ಬಲವಾಗಿದ್ದರೂ, ಗವಿಗಳೊಳಗೆ ಅಲುಗದೆ ಮಲಗಿದ್ದ ಸಿಂಗಗಳು ಶಿರಗಳನ್ನು ತಿರುಹಿ ನೋಡಿದ ಕುಡಿನೋಟವು ಸಮಬಲವನ್ನು ಸೂಚಿಸುತ್ತಲಿದ್ದಿತು, ಆಗ ಭುಜಪತ್ರಿಯ ಗಿಡಗಳಲ್ಲಿ ಮುರಮುರನೆಂಬ ಸದ್ದನ್ನುಂಟುಮಾಡುತ್ತಾ, ಬಿದಿರು

ಮೆಳೆಗಳಲ್ಲಿ ಒಳಹೊಕ್ಕು ಕೊಳಲದನಿಯನ್ನು ಕಲ್ಪಿಸಿ, ಬಿಡುಗಣ್ಣರ ಪನಲ ಪನಿಯನ್ನಾಂತು ಹರಿದುಬರುವ ಮೆಲ್ಲೆಲರು ಮಾರಾಯನಿಗೆ ಹಾಯಾಗಿದ್ದಿತು, ಮತ್ತು - ಆ ಪ್ರಾಂತದ ದೇವಹೊನ್ನೆಯ ಮರಗಳ ನೆಳಲುಗಳಲ್ಲಿನ ಬಂಡೆಗಳಮೇಲೆ ಕತ್ತುರಿಯ ಮಿಕಗಳು ಬಿದ್ದುಗೊಂಡು ನಿದ್ದೆಗೈದಿದ್ದುವು, ಆ ಶಿಲೆಗಳು ಹೊಕ್ಕುಳ ಸೋಂಕಿನಿಂದ ಸುವಾಸನೆಗಳಾಗಿದ್ದುವು. ಅಲ್ಲಿಯೇ ರಘುಸೈನಿಕರು ಬಳಲಿಕೆಯನ್ನು ಕಳೆದರು, ಅಂದಿನ ಇರುಳಿನಲ್ಲಿ ಅಂಕೋಲೆ ಗಿಡಗಳಿಗೆ ಕಟ್ಟಿದ್ದ ಆನೆಗಳ ಕೊರಳಿನ ಬಂಗಾರವ ಸರಪಣಿಗಳಲ್ಲಿ, ಆ ನೆಲದಲ್ಲಿ ಬೆಳೆದ ಬಳ್ಳಿಗಳು ಹೊಳೆದು, ದಳದಾಳುಗಳಿಗೆ ಆ ಇರುಳಿನಲ್ಲಿ ಎಣ್ಣೆಯಿಲ್ಲದ ದೀವಿಗೆಗಳಾದುವು. ಮೂರನೆಯ ದಿನ ಅರಸು-ಅಲ್ಲಿಂದ ಮುಂದಕ್ಕೆ ಪಯಣಮಂ ಬೆಳಸಿದನು. ಅಂದು ಆ ಅಟವಿಗೆ ಬಂದ ಬೇಟೆಗಾರರಿಗೆ ಆನೆಗಳ ಕಟ್ಟುಗಳಗೊಳಗಾಗಿದ್ದುತಿಗಜೆದ್ದಿದ್ದ ಅಂಕೋಲೆ ಗಿಡಗಳು-ದಳದಾನೆಗಳ ಮಟ್ಟದಳತೆಯನ್ನು ತಿಳಿಸಿದುವು. ಹಿಮಗಿರಿಯಲ್ಲಿನ ಉತ್ಸವರೆಂಬ ಗಣದವರೊಡನೆ ರಘುವಿಗೆ ಘೋರವಾದ ಬವರವು ಬೆಳೆಯಿತು, ಗಣದವರಿಡುವ ಕವಣೆಗಲ್ಲುಗಳೂ, ದಳಪತಿಗಳೆಸೆವ ಅಂಬಿನಲುಗುಗಳೂ ಒಂದಕ್ಕೊಂದು ತಗಲಿ ಬೆಂಕಿಯ ಕಿಡಿಗಳುದುರುತ್ತಿದ್ದವು, ರಘುವು - ತನ್ನ ಶೌರ್ಯದಿಂದ ಉತ್ಸವರ ಉತ್ಸಾಹವನ್ನೆಲ್ಲ ಅಡಗಿಸಿದನು, ಕಿನ್ನರರು ಅರಸಿನ ತೋಳುಬಲವನ್ನು ಹಾಡಿ ಕೊಂಡಾಡಿದರು. ಬಳಿಕ - ಉತ್ಸವರೆಂಬ ಪರ್ವತೀಯರು ಕಾಣಿಕೆಗಳನ್ನು ಕಯ್ಯಲ್ಲಿ ಹಿಡಿದರು. ಆಗ ಹಿಮಗಿರಿಯ ಸಾರವು ರಘುರಾಜನಿಗೂ, ಅರಸಿನ ಸಾರವು ಹಿಮಗಿರಿಗೂ ಗೊತ್ತಾಯಿತು. ತರುವಾಯ - ರಘುವು ಹಿಮಾದ್ರಿಯಲ್ಲಿ ತನ್ನ ಯಶೋರಾಶಿಯನ್ನು ನೆಲೆಗೊಳಿಸಿ, ದಶಗಳನತ್ತಿದುದರಿಂದ ಮೊದಲೇ ಪರಾಜಯವನ್ನುಪಡೆದ ಕೈಲಾಸಕ್ಕೆ ಲಜ್ಜೆಯನ್ನುಂಟುಮಾಡುವವನಂತೆ ಅಲ್ಲಿಗೆ ತೆರಳದೆ ಹಿಂದಿರುಗಿದನು. ಮತ್ತು-ಲೌಹಿತ್ಯವೆಂಬ ನದಿಯನ್ನು ದಾಟಿ, ಕಾಮರೂಪ ದೇಶಗಳೊಳಪೊಕ್ಕನು. ಕಾಮರೂಪೇಶ್ವರನು - ಮೊದಲೇ ರಘುಪ್ರತಾಪವನ್ನು ಕೇಳಿದ್ದನು, ಪತ್ತಿರಕ್ಕೆ ಒಂಮುದಂ ಕೇಳಿ ಹೆದರಿ, ದಳದ ದ್ವಿರದಗಳ ಕಟ್ಟುಗಾಸರೆಯಾದ ಕಾಲಾಗುರು ತರುಗಳಂತೆ ನಡುಗಿದನು, ಸೋನೆಗರೆಯುದಿದ್ದರೂ

ದಂಡಿನ ತುಳಿತದಿಂದೆದ್ದ ರಜದಿಂದ ರವಿಯು ಕಾಣಬರದೆ ದುರ್ದಿನವಾಯಿತು, ಧೂಳಿ ದರ್ಶನವನ್ನು ತಾಳಲಾರದ ಅರಸು ದಾಳಿಯನ್ನು ತಾಳಬಲ್ಲನೆ? ತರುವಾಯ - ಕಾಮರೂಪರಾಜನು - ರಘುವನ್ನು ಹೊರತು ಉಳಿದರಸರನ್ನೆಲ್ಲ ತನ್ನ ಆನೆಯ ಬಲದಿಂದಲೇ ಗೆದ್ದಿದ್ದನು ಈಗ-ಅವುಗಳನ್ನೆಲ್ಲ ಇಂದ್ರನಿಗಿಮ್ಮಡಿಯಾದ ಶೌರ್ಯವುಳ್ಳ ರಘುವಿಗೊಪ್ಪಿಸಿ ಶರಣುಹೊಂದಿದನು. ಮತ್ತು - ರಘುವಿನಡಿದಾವರೆಗಳನ್ನು ಚಿನ್ನದ ಮಣೆಯ ಮೇಲೆ ಕುಳ್ಳಿರಿಸಿ, ದೇವತೆಯಂತೆ ಭಾವಿಸಿ, ರತ್ನಗಳಿಂದ ಪೂಜಿಸಿ, ಆತನನ್ನು ಗೌರವಿಸಿದನು.

ಹೀಗೆ - ಜಯಶೀಲನಾದ ರಘುಮಹಾರಾಜನು ತನ್ನಿದಿರಿಗೆ ಕೊಡೆಯನ್ನು ಹಿಡಿಯದಂತಾದ ಹಗೆಯರಸರ ಶಿರಗಳಮೇಲೆ, ತೇರಿನ ರಜವನ್ನೇರಿಸಿ, ಸಕಲ ದಿಗ್ವಿಜಯಮಂಗೈದು, ತನ್ನ ದೇಶದಕಡೆಗೆ ತಿರುಗಿದನು.

ತದನಂತರದಲ್ಲಿ ಪುರಮಂ ಸೇರಿದ ರಘು ಭೂಪಾಲನು - ಸರ್ವಸ್ವವನ್ನೂ ದಕ್ಷಿಣೆಯನ್ನಾಗಿ ಬಳಗೊಂಬ ಸರ್ವಜಿತ್ತೆಂಬ ಯಾಗವನ್ನು ಮಾಡಲು ಒಲು ಸಡಗರದಿಂದ ಕೈಗೊಂಡನು, ವಾರಿದಗಳಂತೆ ಸಂತರು ಪಡೆವುದೆಲ್ಲ ಕೊಡುವುದಕೇ ಅಲ್ಲವೆ?.

ಇಂತು - ರಘುವರನು ಸತ್ರವನ್ನು ಶ್ರದ್ಧೆಯಿಂದ ಸಮಗೊಳಿಸಿ ಶುಭಸ್ನಾನಮಂಗೈದು, ಸಂದಣಿಸಿದ್ದ ಸರ್ವೋರ್ವೀಶರಿಗೂ ಸಕಲ ಸತ್ಕಾರಗಳನ್ನೂ ಸಚಿವವರರ ಸಹಾಯದಿಂದ ಸಂತೋಷಪೂರ್ವಕವಾಗಿ ಸಮರ್ಪಿಸಿ ಸಂತಸಗೊಳಿಸಿದನು. ಇದರಿಂದ ಯಾಗಕ್ಕೈತಂದಿದ್ದ ಪರರಾಯರೆಲ್ಲ ಕಾಳಗದಲ್ಲಿ ಕೀಳಾಗಿ ಪರಾಜಯಮಂ ಪಡೆದೆವೆಂದು ಮನದೊಳುಂಟಾಗಿದ್ದ ಕಳವಳವನ್ನೆಲ್ಲ ಕಳೆದು ಹರ್ಷಪರವಶರಾದರು. ಇಂತು ಕಾಕುತ್ಸ್ಥನು -ಬಹು ದಿವಸಗಳಿಂದ ಅಂತಃಪುರಗಳನ್ನು ಅಗಲಿ ಬಂದಿದ್ದ ಅರಸರನ್ನೆಲ್ಲ ತಂತಮ್ಮ ಪುರಗಳನ್ನು ಕುರಿತು ತೆರಳಲು ಸಮ್ಮತಿಸಿದನು. ಬಳಿಕ - ಪಯಣಕಣಿಯಾಗುತಲಿರುವ ಇಳೆಯಾಣ್ಮರೆಲ್ಲಿ ಛತ್ರಧ್ವಜಚಾಮರಗಳ ರೇಖೆಗಳಿಂದೊಡಗೂಡಿ, ಆತನ ಅನುಗ್ರಹದಿಂದಲೇ ಲಭಿಸತಕ್ಕುದಾಗಿರುವ ರಘುಸಾರ್ವಭೌಮನ ಅಡಿದಾವರೆಗಳಿಗೆ ಎರಗಿ ಹೊರಟರು, ಬಾಗಿದ ಶಿರಗಳಿಂದುದಿರಿದ ಪುಷ್ಪರಜಗಳಿಂದ

ಪೊಡವಿಯೊಡೆಯನ ಪಾದಪದ್ಮಗಳು ಪಲತೆರನಾದ ಬಣ್ಣವಂ ತಾಳುತಲಿದ್ದುವು.

— ಇಂತು ನಾಲ್ಕನೆಯ ಅಧ್ಯಾಯಂ —



ಶ್ರೀಃ.

ಶ್ರೀ ಶಾರದಾಮ್ಬಾಯೈನಮಃ.

## ಐದನೆಯ ಅಧ್ಯಾಯಂ.



ಸೂಚನೆ॥ ಗುರುಧನವ ಬೇಡೆ ಕೌತ್ಸಂ ।
ಗುರುತರಧನ ದಾನಕ್ಕೈದು ರಘುವರ್ಬೇಸಿದಂ ॥
ಗುರುವರ ದುಡಿಸಿದ ನಜನುಂ ।
ಗುರುಗುಣದಿಂ ಮೆರೆದು ಭೋಜ ನಗರಿಗೆ ಸಾರ್ದಂ ॥

ವರತಂತುವೆಂಬ ಮಹರ್ಷಿಯೋರ್ವನುಂಟು. ಕೌತ್ಸನೆಂಬ ವಿದ್ಯಾರ್ಥಿಯು ಆತನ ಬಳಿಯಲ್ಲಿ ಸಕಲ ವಿದ್ಯೆಗಳನ್ನೂ ಸಾಂಗವಾಗಿ ಕಲಿತನು. ಗುರುದಕ್ಷಿಣೆ ಕೊಡಬೇಕಾಗಿ ಬಂದಿತು. ದಕ್ಷಿಣಾದ್ರವ್ಯವನ್ನು ಸಂಪಾದಿಸಲು ರಘುಭೂಪಾಲನ ಬಳಿಗೆ ಬಂದನು, ಅದುವರೆಗೆ ವಸುಮತೀಶನು ಸರ್ವಜಿತ್ತೆಂಬ ಯಾಗವನ್ನಾಚರಿಸಿ, ಬೊಕ್ಕಸವು ಬರಿದಾಗುವಂತೆ ಸರ್ವಸ್ವವನ್ನೂ ದಕ್ಷಿಣೆಗೆ ವೆಚ್ಚಮಾಡಿ ಬರಿಗಯ್ಯನಾಗಿದ್ದನು. ಲೋಕದಲ್ಲೆಲ್ಲ ಹರಡಿಕೊಂಡಿರತಕ್ಕ ಒಳ್ಳೆಯ ಹೆಸರುವಾಸಿಯನ್ನು ಪಡೆದಿರುವ ಒಳ್ನಡೆಯ ಪೊಡವಿಯೊಡೆಯನು- ಅತಿಥಿಗಳನ್ನು ಸತ್ಕರಿಸುವುದರಲ್ಲಿ ಬಹುಸಮರ್ಥನು, ಶಾಸ್ತ್ರಜ್ಞಾನದಿಂದ ಬೆಳಗುತಲಿರುವ ಕೌತ್ಸಮುನಿಕುಮಾರನು ಅತಿಥಿಯಾಗಿ ಬಂದಿರುವನೆಂಬ ಸುದ್ದಿಯು ದ್ವಾರಪಾಲಕನಿಂದ ತಿಳಿಯಿತು. ಉಚಿತ ರೀತಿಯಿಂದ ಇದಿರ್ಗೊಳ್ಳಲು ರಾಜಾರ್ಹವಾದ ಚಿನ್ನದ ಪಾತ್ರೆಯೊಂದೂ ಇರಲಿಲ್ಲ. ಮಣ್ಣಿನ ತಟ್ಟೆಬಟ್ಟಲುಗಳಲ್ಲಿಯೇ

ಪೂಜೆಗೆ ಬೇಕಾದ ಪದಾರ್ಥಗಳನ್ನೆಲ್ಲ ಅಣಿಮಾಡಿಕೊಂಡು ಹೊರಟನು. ಶಾಸ್ತ್ರಗಳನ್ನೆಲ್ಲ ಚೆನ್ನಾಗಿ ಅರಿತು, ಮಾನಧನರೊಳಗೆ ಮೊದಲನೆಯವನೆನಿಸಿ, ಕಾರ್ಯಗೌರವದ ಸಂದರ್ಭಗಳನ್ನು ಬಲ್ಲವನಾಗಿರುವ ನರನಾಥನು ಉಚಿತಸ್ಥಾನದಲ್ಲಿ ತಪೋಧನನನ್ನು ಇದಿರ್ಗೊಂಡು, ಪೀಠವನ್ನಿತ್ತು, ವಿಧಿಪ್ರಕಾರ ಸತ್ಕರಿಸಿ, ಕೈಜೋಡಿಸಿಕೊಂಡು, ಆತನ ಬಳಿಯೊಳು ನಿಂತು ಇಂತೆಂದನು—

ದರ್ಭೆಯ ತುದಿಯಂತೆ ಮೊನೆಯಾದ ಮತಿಯುಳ್ಳ ಎಲೈ ಮುನಿಯೇ! ಮಂತ್ರಕರ್ತರಾದ ಮಹರ್ಷಿಗಳೊಳಗೆ ಅಗ್ರಗಣ್ಯನೆನಿಸಿದ ನಿನ್ನಯ ಗುರುವು ಕುಶಲದಿಂದಿರುವನೆ? ದಿನನಾಥನಿಂದ ಜನವು ಎಚ್ಚರವನ್ನು ಪಡೆವಂತೆ, ಆತನಿಂದಲೇ ಅಲ್ಲವೆ ನೀನು ಶಾಸ್ತ್ರಜ್ಞಾನವನ್ನೆಲ್ಲ ಸಂಪಾದಿಸಿರುವುದು? ಮೈ, ಮಾತು, ಮನ ಎಂಬೀ ಮೂರು ಕರಣಗಳಿಂದ ಆತನು ಗಳಿಸುತಲಿರುವ ತಪವು - ತನಗೆಲ್ಲಿ ತಾವು ತಪ್ಪುವವೋ ಎಂದು ಇಂದ್ರನನ್ನೂ ಅಳುಕಿಸತಕ್ಕುದು. ಅಂತಹ ತಪಸ್ಸು ಆವುದೊಂದು ಅಡ್ಡಿವಿಡ್ಡರದಿಂದಲೂ ಕುಂದದಿರುವುದೆ? ಪಾದೆಗಟ್ಟುವುದು, ಹದವರಿತು ನೀರ ಬಿಡುವುದು, ನೆಟ್ಟಿಯರಿತು ಗೊಬ್ಬರವಿಡುವುದು, ಎಂಬಿವೇ ಮೊದಲಾದ ಬೇಸಾಯಗಳಿಂದ ಹಸುಳೆಗಳನ್ನು ಹೇಗೋ ಹಾಗ ಕಾಪಾಡಿದ ನಿಮ್ಮ ತಪೋವನದ ತರುಗಳು ಬಳಲಿಕೆಗಳನ್ನು ಕಳೆಯತಕ್ಕವುಗಳೆನಿಸಿ, ಬಿರುಗಾಳಿ ಮೊದಲಾದವುಗಳಿಂದ ನೋವನ್ನು ಪಡೆಯದಿವೆಯೆ? ಸತ್ಕರ್ಮಾಚರಣೆಗೆ ಬೇಕಾದವುಗಳೆಂದು ಅಕ್ಕರೆಯಿಂದ ಬೆಳೆಯಿಸಿಕೊಂಡಿರುವ ದರ್ಭೆ ಹುಲ್ಲುಗಳನ್ನು ಮೆಯ್ದರೂ, ಮಮತೆಯಿಂದ ಮುನಿಗಳ ಅಡ್ಡಿಯನ್ನು ಪಡೆಯದಿರುವ ಹುಲ್ಲೆಗಳ ಮರಿಗಳು - ತಾನಾಗಿ ಹೊಕ್ಕಳು ಬೀಳುವವರೆಗೂ ತಪಸ್ವಿಗಳ ತೊಡೆಗಳ ಮೇಲೆಯೇ ಬೆಳೆಯುತ್ತಾ, ಆವುದೊಂದು ಅಪಾಯವೂ ಇಲ್ಲದೆ ಸುಖದಿಂದಿರುವುವೆ? ನೇಮದ ಸ್ನಾನಗಳೀಡೇರಲು ಊಪಾಗಿ, ಪಿತೃಗಳಿಗೆ ಕೊಡತಕ್ಕ ತರ್ಪಣಗಳಿಗೆ ಆಸರೆಯೆನಿಸಿ, ಹಕ್ಕಲಾಯ್ದು ತಂದ ಕಾಳುಕಡಿಗಳಲ್ಲಿ ಅರಸಿಗೆ ಕೊಡತಕ್ಕ ಕಂದಾಯವೆಂದು ತೆಗೆದಿಡುವ ಆರನೆಯ ಒಂದು ಪಾಲಿಗೆ ತಮ್ಮ ತಡಿಯ ಬೈಲಿನಲ್ಲಿ ಎಡೆಗೊಟ್ಟಿರುವ ನಿಮ್ಮ ತೀರ್ಥೋದಕಗಳು ಆವುದೊಂದು ತೊಂದರೆಗೂ ಒಳಗಾಗದಿರುವುವೆ? ಮಧ್ಯಾಹ್ನಾದಿ ಕಾಲಗಳಲ್ಲಿ ಬರುವ

ಅತಿಥಿಗಳ ಸತ್ಕಾರಕ್ಕೆ ತಕ್ಕ ಭಾಗಗಳನ್ನೊಳಗೊಂಡು, ನಿಮ್ಮ ಪ್ರಾಣ ಧಾರಣೆಗೂ ಅನುಕೂಲಗಳೆನಿಸಿ, ಕಾಡಿನಲ್ಲಿ ಬೆಳೆಯುತಕ್ಕವುಗಳಾಗಿರುವ ಯವೆ, ಸಾವೆ ಮೊದಲಾದ ಕಾಳುಕಡಿಗಳನ್ನು ನಾಡುಗಳಿಂದ ಓಡಿಬಂದ ತೊಂಡು ದನಗಳು ತಿಂದುಹೋಗುವುದಿಲ್ಲವಷ್ಟೆ? ನಿನ್ನನ್ನು ಅಕ್ಕರೆ ಯಿಂದ ಚೆನ್ನಾಗಿ ಶಿಕ್ಷಿಸಿದ ಮಹಾಮುನಿಯು ಗೃಹಸ್ಥಾಶ್ರಮವನ್ನು ಪಡೆಯುವಂತೆ ನಗೆಮೊಗದಿಂದ ಒಪ್ಪಿ, ನಿನಗೆ ಅಪ್ಪಣೆಯನ್ನಿತ್ತನೆ? ಉಳಿದ ಆಶ್ರಮದವರಿಗೆಲ್ಲ ಉಚಿತವರಿತು ಉಪಕರಿಸಲು ಎರಡನೆಯ ಆಶ್ರಮವನ್ನು ಸ್ವೀಕರಿಸಲಿಕ್ಕೆ ನಿನಗೆ ಇದು ಒಳ್ಳೆಯ ಸಮಯವಾಗಿ ದೆಯಲ್ಲವೆ? ಎಲೈ ಮುನಿಯೆ! ಪೂಜ್ಯನಾದ ನಿನ್ನ ಆಗಮನ ಮಾತ್ರ ದಿಂದ ನನ್ನ ಮನವು ತಣಿಯಲಿಲ್ಲ. ಮುಂದೆ ನಿನ್ನ ಅಪ್ಪಣೆಯನ್ನರಿತು ಅದರಂತೆ ನಡೆಸಲು ತವಕಿಸುತಲಿದೆ. ಗುರುಪ್ರಯೋಜನಕ್ಕೋಸ್ಕರ ತಪೋವನದಿಂದ ಬಂದೆಯ? ಅಥವಾ ಸ್ವಾರ್ಥಪರನಾಗಿ ನನ್ನನ್ನುನೋಡ ಲಿಕ್ಕೆ ಬಂದಿರುವೆಯ? ಎಂದಿಂತು ಮಹಾರಾಜನು ಮುನಿಗೆ ಸುಖಾಗಮ ನಮಂ ಬಯಸಿ ಕುಶಲಪ್ರಶ್ನೆಯಂ ಗೈದನು.

ವರತಂತು ಮುನಿಯ ಶಿಷ್ಯನಾದ ಕೌತ್ಸನು - ತನ್ನನ್ನು ಇದಿರ್ಗೊ ಳ್ಳಲು ತಂದಿರುವ ಪಾತ್ರೆಗಳಿಂದಲೇ ರಘುವಿನ ಆಸ್ತಿಯೆಲ್ಲ ವೆಚ್ಚವಾಗಿ ಹೋಗಿದೆಯೆಂಬುದನ್ನು ತಿಳಿದುಕೊಂಡನು. ಅವನ ಬಲುಕೊಡು ಗಯ್ಯ ಮಾತನ್ನು ಕೇಳಿದನು, ತನ್ನ ಕೋರಿಕೆಯು ಈಡೇರುವುದೆಂಬ ಆಶೆಯು ಬಲಗುಂದಿತು. ಆದರೂ ಆತನನ್ನು ಕುರಿತು ಮಾತನಾಡತೊ ಡಗಿದನು—

ಎಲೈ ಮಹಾರಾಜನೆ! ನಾವು ಎಲ್ಲ ಭಾಗಗಳಲ್ಲಿಯೂ ನೆಮ್ಮದಿ ಯಾಗಿ ಇದೇವೆ ಎಂದು ತಿಳಿ. ನೀನು ಸರ್ವರಿಗೂ ನಾಥನಾಗಿರುವಲ್ಲಿ ಪ್ರಜೆಗಳಿಗೆ ಕೊರತೆಯುಂಟಾಗಲು ಕಾರಣವೇನು? ಭಾಸ್ಕರನು ಬೆಳ ಗುತಲಿರುವಲ್ಲಿ ಕತ್ತಲು ಕಣ್ಣಿನ ನೋಟಕ್ಕೆ ಅಡ್ಡಿಯಾಗುವುದೆಂತು? ಪೂಜ್ಯರೆನಿಸಿದವರಲ್ಲಿ ಇಂತು ಭಕ್ತಿಯನ್ನು ತೋರುವುದು ನಿನ್ನ ವಂಶ ಕ್ರಮದಿಂದ ಬಂದಿರುವ ಒಳ್ಳೆಯ ಪದ್ಧತಿಯಾಗಿದೆ. ಎಲೈ ಪುಣ್ಯಾ ತ್ಮನೇ! ಒಳ್ಳೆಯ ಸಂಪ್ರದಾಯದಲ್ಲಿ ನಿನ್ನ ಹಿರಿಯರನ್ನು ಮೀರುತಲಿ ದ್ದೀಯೆ, ಉಚಿತವಾದ ಕಾಲವು ಕಳೆದುಹೋದಬಳಿಕ ಯಾಚನೆಗಾಗಿ

ನಿನ್ನನ್ನು ಇದಿರ್ಗೊಳ್ಳಲು ಬಂದೆನಲ್ಲಾ ಎಂದು ನನ್ನ ಮನಸ್ಸಿಗೆ ಬಲು ಕೊರತೆಯುಂಟಾಗಿದೆ. ಎಲೈ ಭೂದೇವೇಂದ್ರನೇ ! ಅರಣ್ಯವಾಸಿಗಳಾದ ತಾಪಸರು - ತೆನೆಯನ್ನೆಲ್ಲ ತೆಗೆದುಕೊಂಡಬಳಿಕ ದಂಟಿನಿಂದ ಮಾತ್ರವೇ ನಿಂತಿರುವ ಪೈರಿನಹಾಗೆ, ಸತ್ಪಾತ್ರಗಳಲ್ಲಿ ಸಂಪದಗಳನ್ನೆಲ್ಲ ವಿನಿಯೋಗಿಸಿದ ನೀನು ಶರೀರಮಾತ್ರದಿಂದ ಉಳಿದು ಬೆಳಗುತಲಿದ್ದೀಯೆ, ಆದರೂ ಚಿಂತೆಯಿಲ್ಲ. ನೀನು ಇದಿರಾಳಿಲ್ಲದ ಅರಸನೆನಿಸಿ, ಯಾಗದಲ್ಲಿ ನಡೆಸಿದ ಭೂರಿದಾನದಿಂದುಂಟಾಗಿರುವ ಹೆಚ್ಚಿನ ಬಡತನವನ್ನು ವ್ಯಕ್ತಪಡಿಸುವುದು ಬಹು ಶ್ಲಾಘ್ಯವಾಗಿದೆ. ಕೃಷ್ಣಪಕ್ಷದ ಪಾಡ್ಯ ಮೊದಲ್ಗೊಂಡು ದಿನಕ್ರಮದಲ್ಲಿ ದೇವತೆಗಳು ಪಾನಮಾಡುವುದರಿಂದ ಚಂದಿರನ ಕಳೆಗಳ (ಕೊರತೆಯು) ತಗ್ಗಲು, ಮುಂದಿನ (ಏಳಿಗೆಗಾಗಿ) ಹೊರವಿಗಾಗಿ ಶ್ಲಾಘ್ಯತರವೆನಿಸುವುದಿಲ್ಲವೆ ? ಆ ಕಾರಣ ಬೇರೊಂದು ಕೆಲಸವಿಲ್ಲದ ಈ ನಾನು-ಮತ್ತೊಬ್ಬ ದಾತನಿಂದ ಗುರುಧನವನ್ನು ಸಂಪಾದಿಸಲಿಕ್ಕೆ ಪ್ರಯತ್ನಿಸುವೆನು, ನಿನಗೆ ಶುಭವಾಗಲಿ ! ಹೊರಡುತ್ತೇನೆ. ಚಾತಕ ಪಕ್ಷಿಯೂ-ನೀರುತುಂಬಿಲ್ಲದ ಶರತ್ಕಾಲದ ಮೋಡವನ್ನು ಬೇಡುವುದಿಲ್ಲವಷ್ಟೆ ? ಎಂದಿಷ್ಟನ್ನು ಹೇಳಿ, ಬಂದ ದಾರಿಯನ್ನು ಹಿಡಿಯಲಿಕ್ಕೆ ಹೊರಟ ಮಹರ್ಷಿ ಶಿಷ್ಯನನ್ನು ಮಹೀಪತಿಯು ತಡೆದು, ಎಲೈ ಪ್ರಾಜ್ಞನೇ ! ಗುರುವಿಗೆ ನೀನು ಕೊಡಬೇಕಾಗಿರುವ ವಸ್ತುವಾವುದು ? ಮತ್ತು ಎಷ್ಟು ಕೊಡಬೇಕಾಗಿದೆ? ಎಂದಾತನನ್ನು ಬೆಸಗೊಂಡನು.

ಬಳಿಕ - ವರ್ಣಗಳಿಗೂ, ಆಶ್ರಮಗಳಿಗೂ ನಿಯಾಮಕನೆನಿಸಿ, ವಿಧಿಪ್ರಕಾರ ಯಾಗವನ್ನಾಚರಿಸಿ, ಹೆಮ್ಮೆಯಿಲ್ಲದೆ ತಗ್ಗಿರುವ ಆ ಧರಾನಾಥನಿಗೆ, ಬಲು ಜಾಣನಾದ ಕೌತ್ಸಬ್ರಹ್ಮಚಾರಿಯು ಪ್ರಕೃತ ಕಾರ್ಯವನ್ನು ಹೇಳತೊಡಗಿದನು:—

ಎಲೈ ಕ್ಷಮಾನಾಥನೇ! ಲಾಲಿಸು - ಗುರುವಿನ ಬಳಿಯಲ್ಲಿ ಸಾಂಗವಾಗಿ ವಿದ್ಯೆಗಳನ್ನೆಲ್ಲ ಕಲಿತೆನು, ಬಳಿಕ ಗುರುವೇ ! ಗುರುದಕ್ಷಿಣೆಯನ್ನು ಸ್ವೀಕರಿಸಬೇಕು ಎಂದು ಬಿನ್ನವಿಸಿದೆನು. ಅದಕ್ಕೆ ಆತನು - ಬಹುಕಾಲದಿಂದ ನಾನು ಕಷ್ಟಪಟ್ಟು ತಪ್ಪದಾಚರಿಸಿದ ಸೇವೆಯನ್ನೇ ಮುಂದುಮಾಡಿಕೊಂಡು "ನಿನ್ನ ಅಸಾಧಾರಣವಾದ ಭಕ್ತಿಯಿಂದಲೇ ನಾನು ಸಂತುಷ್ಟನಾಗಿದ್ದೇನೆ, ಇನ್ನು ಬೇರೆ ದಕ್ಷಿಣೆಯೇಕೆ?"

ಎಂದನು; ಅಲ್ಲಿಗೆ ನಾನು ಸುಮ್ಮನಾಗಲಿಲ್ಲ. ಅಡಿಗಡಿಗೂ ದಕ್ಷಿಣೆಯು ಸ್ವೀಕಾರಕ್ಕೆ ಬಲಾತ್ಕರಿಸಿದೆನು, ಇದರಿಂದ ಗುರುವಿಗೆ ಸಿಟ್ಟು ಹತ್ತಿತು, ಧನದ ವಿಷಯದಲ್ಲಿ ನನ್ನ ಬಡತನವನ್ನು ಗಣಿಸಲಿಲ್ಲ, ತರುವಾಯ - "ನೀನು ನನ್ನಲ್ಲಿ ಕಲಿತಿರುವುದು ಹದಿನಾಲ್ಕು ವಿದ್ಯೆಗಳು, ಆದಕಾರಣ ವಿದ್ಯೆಗಳ ಲೆಕ್ಕವನ್ನನುಸರಿಸಿ ಹದಿನಾಲ್ಕು ಕೋಟಿ ದ್ರವ್ಯವನ್ನು ದಕ್ಷಿಣೆಯನ್ನಾಗಿ ನನಗೆ ತಂದುಕೊಡು" ಎಂದನು. ನಾನಾದರೋ ಇಂತಹ ಕಷ್ಟಿಗೆ ಸಿಲುಕಿದೇನೆ. ಪ್ರಭುಶಬ್ದವೊಂದೇ ನಿನಗೆ ಉಳಿದಿದೆ ಎಂಬುದನ್ನು ಪೂಜಾಪಾತ್ರೆಯಿಂದ ತಿಳಿದುಕೊಂಡೆನು. ಗುರುವಿಗೊಪ್ಪಿಸಬೇಕಾದ ವಿದ್ಯಾಮೌಲ್ಯವಾದರೋ ಹೇರಳವಾದುದು, ಆದಕಾರಣ ಈಗ ನಿನ್ನನ್ನು ನಿರ್ಬಂಧಿಸಿ ತೊಂದರೆಗೊಳಿಸಲು ನಾನು ಇಷ್ಟಪಡುವುದಿಲ್ಲ ಎಂದನು. ಅರಸು ಅದ್ವಿತೀಯನೆನಿಸಿದವನು, ಜಿತೇಂದ್ರಿಯನಾಗಿ ಧರ್ಮಾತ್ಮನೆಂದು ಹೆಸರುಗೊಂಡಿರುವನು, ಉಡುರಾಜನಂತೆ ಬೆಳಗುತಲಿದ್ದಾನೆ, ವೇದವಿದರೊಳಗೆ ಅಗ್ರೇಸರನೆನಿಸಿರುವ ಆ ದ್ವಿಜವರನ ವಚನವನ್ನು ಕೇಳಿ ಮರಳಿ ಇಂತೆಂದನು—

ಎಲೈ ಮುನಿವರನೇ! "ವರತಂತು ಮಹರ್ಷಿಯ ಶಿಷ್ಯನಾದ ಕೌತ್ಸ ಮುನಿಯು ಸಕಲ ಶಾಸ್ತ್ರಪಾರಂಗತನಾಗಿ, ಗುರುದಕ್ಷಿಣೆಯ ಧನವನ್ನು ಬೇಡಲಿಕ್ಕೆ ರಘುವಿನಬಳಿಗೆ ಬಂದಿದ್ದನು, ಆದರೆ ಅಲ್ಲಿ ಕೋರಿಕೆಯು ಕೈಗೂಡಲಿಲ್ಲ, ಬಳಿಕ್ಕೆ ಬೇರೊಬ್ಬ ದಾತನನ್ನು ಅರಸುತ ಹೋದನು" ಎಂಬೀ ಹೊಸದಾದ ಲೋಕಾಪವಾದವು ನೆಗಳದರೆ, ರಘುವು ಲಘುವಾಗುವುದಿಲ್ಲವೆ ? ಅಥವಾ ರಘುವಂಶವೇ ಲಘುವಂಶವಾಗುವುದಿಲ್ಲವೆ ? ನನಗೀ ಅಪಕೀರ್ತಿಯುಂಟಾಗಬೇಡ. ಆದಕಾರಣ ಗುರುಧನಾಭಿಲಾಷಿಯಾದ ನೀನು-ಪಾವನವಾಗಿ, ಪೂಜ್ಯವೆನಿಸಿರುವ ನನ್ನ ಅಗ್ನಿಹೋತ್ರದ ಮನೆಯಲ್ಲಿ ಎರಡು ಮೂರು ದಿನಗಳು ಮಾತ್ರ ನಾಲ್ಕನೆಯ ಅಗ್ನಿಯಂತೆ ತಾಳ್ಮೆಯಿಂದಿರು. ಅಷ್ಟರೊಳಗೆ ನಿನ್ನ ಪ್ರಯೋಜನವನ್ನು ಸಂಪಾದಿಸಲಿಕ್ಕೆ ಪ್ರಯತ್ನಿಸುವೆನು ಎನಲು, ಆತನ ಅಮೋಘನಾದ ಪ್ರತಿಜ್ಞಾವಚನವನ್ನು ಕೇಳಿ ದ್ವಿಜವರನಾದ ಕೌತ್ಸನು ಸಂತುಷ್ಟವಾಗಿ, ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಬಳಿಕ ರಘುವೂ-ತನ್ನ ಧರೆಯ ಸಾರವೆಲ್ಲ ಪರಿಗ್ರಹಿಸಲಟ್ಟಿದೆ ಎಂದರಿತು, ಕುಬೇರನಿಂದ ಧನವನ್ನು

ತರಬೇಕೆಂದು ನಿಶ್ಚಯಿಸಿದನು. ವಶಿಷ್ಠಮುನಿಯು ಮಂತ್ರಿಸಿ, ಜಲವನ್ನು ಪ್ರೋಕ್ಷಿಸಿದ್ದುದರ ಮಹಿಮೆಯಿಂದಲೇ, ನೆಲ, ಮುಗಿಲು, ಕಡಲುಗಳೊಳಗೆ ಲ್ಲಿಯೂ, ಗಾಳಿಯ ಸಹಾಯವುಳ್ಳ ಮೋಡಕ್ಕೆ ಹೇಗೋಹಾಗೆ, ರಘುವಿನ ದಾರಿಗೆ ಅಡ್ಡಿಯೇ ಇರಲಿಲ್ಲ.

ಬಳಿಕ ಧೀರನಾದ ರಘುವು - ಕೈಲಾಸಕ್ಕೊಡೆಯನಾದ ಕುಬೇರನನ್ನು, ಇವನೂ ಒಬ್ಬ ಸಾಧಾರಣದ ದೊರೆಯೆಂದು ಭಾವಿಸಿ, ತನ್ನ ತೋಳುಬಲದಿಂದ ಗೆಲ್ಲಬೇಕೆಂದು ಬಯಸಿ, ಆ ದಿನ ಸಾಯಂಕಾಲದ ಹೊತ್ತಿಗೆ ಬಿಲ್ಲು ಬಾಣ ಬತ್ತಳಿಕೆಗಳನ್ನೊಳಗೊಂಡಿರುವ ತನ್ನ ತೇರನ್ನು ಏರಿ ಮಲಗಿದನು.

ಮಾರನೆಯ ದಿನ ಬೆಳಗಾಯಿತು, ರಘುವು ವಿಜಯಪ್ರಯಾಣವನ್ನು ಬೆಳಸಲು ಸಿದ್ಧನಾದನು, ಭಂಡಾರದ ಮನೆಯ ಕಾವಲುಗಾರರಾದ ಅಧಿಕಾರಿಗಳು ಅಚ್ಚರಿಗೊಂಡರು, ಓಡಿಬಂದರು, ಒಡೆಯನನ್ನು ಕಂಡರು, ಅಡ್ಡಬಿದ್ದರು, ಕೈಜೋಡಿಸಿ ನಿಂತರು. ಪ್ರಭುವೇ! ನಿನ್ನೆಯ ಇರುಳು - ಕೋಶಗೃಹದ ನಡುವೆ ಮುಗಿಲಿನಿಂದ ಹಣದಮಳೆ ಸುರಿಯಿತು ಎಂದು ಸಂತಸದಿಂದ ಬಿನ್ನವಿಸಿದರು. ರಘುವೂ ಆಶ್ಚರ್ಯಪಟ್ಟನು, ಕೂಡಲೇ ಭಾಂಡಾಗಾರಕ್ಕೆ ಬಂದನು, ಇದಿರಿಸಬೇಕೆಂದಿದ್ದ ಕುಬೇರನಿಂದ ಉಂಟಾಗಿ, ತಳತಳಿಸುತಲಿರುವ ಸುವರ್ಣವೃಷ್ಟಿಯನ್ನು ಕಂಡನು. ವಜ್ರಾಯುಧದ ಪೆಟ್ಟಿನಿಂದ ಒಡೆದ ಮೇರುಪರ್ವತದ ಗುಡ್ಡದಂತಿರುವ ಆ ಹಣದರಾಶಿಯನ್ನೆಲ್ಲ ಕೌತ್ಸಮುನಿಗೆ ಕೊಟ್ಟುಬಿಟ್ಟನು. ಕೌತ್ಸನು ಬೇಡಿದುದಕ್ಕಿಂತ ಹೆಚ್ಚಾದ ಹಣದಲ್ಲಿ ರಘುವು ಆಶೆಯುಳ್ಳವನಾಗಲಿಲ್ಲ. ಗುರುವಿಗೆ ಕೊಡಬೇಕಾದುದಕ್ಕಿಂತ ಅಧಿಕವಾದ ಧನವನ್ನು ಕೌತ್ಸನು ಅಭಿಲಾಷಿಸಲೂ ಇಲ್ಲ. ಇದರಿಂದ ಅಯೋಧ್ಯಾಪುರ ನಿವಾಸಿಗಳಾದ ಜನರಿಗೆಲ್ಲ ಕೌತ್ಸರಘುಗಳಿಬ್ಬರೂ ಬಹು ಶ್ಲಾಘನೀಯರೆನಿಸಿದರು.

ಆ ಬಳಿಕ ಕೌತ್ಸಮುನಿಯು ಸಂತುಷ್ಟಾಂತರಂಗನಾಗಿ, ನೂರಾರು ಒಂಟೆಗಳಮೇಲೆಯೂ, ಹೆಣ್ಣು ಕುದುರೆಗಳಮೇಲೆಯೂ ಹಣವನ್ನು ಹೇರಿಸಿಕೊಂಡು ಹೊರಟು, ಹತ್ತಿರದಲ್ಲಿ ಕರಗಳನ್ನು ಜೋಡಿಸಿಕೊಂಡು ಶಿರಬಾಗಿ ನಿಂತಿರುವ ರಘುವನ್ನು ತನ್ನ ಕರತಲದಿಂದ ತಡವಿ ಇಂತೆಂದನು.

ಅಯ್ಯಾ ದೊರೆಯೆ! ನ್ಯಾಯಾರ್ಜನೆ, ಧರ್ಮಪರಿಪಾಲನೆ, ಸತ್ಪಾತ್ರವಿನಿಯೋಗ, ಈ ಮೊದಲಾದ ಒಳ್ಳೆಯ ನಡತೆಯಲ್ಲಿರುವ ಪ್ರಜಾನಾಥನಾದ ನಿನಗೆ, ಇಳೆಯು ಕೇಳಿದುದನ್ನೆಲ್ಲ ಕೊಡುವುದೆಂಬುದೇನೂ ಆಶ್ಚರ್ಯವಲ್ಲ, ಮುಗಿಲುಕೂಡ ಮನೋಗತವನ್ನು ಕರೆದುದೇ ! ಇದರಿಂದ ನಿನ್ನ ಮಹಿಮೆಯು ಅಸದಳವೆನಿಸಿದೆ. ಎಲೈ ಉರ್ವರೇಶನೆ! ಇಂತಹ ನಿನಗೆ ನಾನು ಮಂಗಳಾಶಾಸನ ಮಾಡತಕ್ಕುದೇನಿದೆ? ಎಲ್ಲ ಮೇಲ್ಮೆಗಳನ್ನು ಪಡೆದಿರುವ ನಿನಗೆ ಇರುವುದನ್ನೇ ಹರಸಿದಂತಾಗುವುದು. ಆದಕಾರಣ-ಸ್ತೋತ್ರಾರ್ಹನಾದ ನಿನ್ನನ್ನು ನಿಮ್ಮ ತಂದೆಯು ಪಡೆದಹಾಗೆ, ನಿನ್ನಂತಹ ಸುಗುಣಸಂಪನ್ನನಾದ ಸತ್ಪುತ್ರನನ್ನು ನೀನೂ ಪಡೆ. ಎಂದೀ ಪ್ರಕಾರ ರಾಜನನ್ನು ಆಶೀರ್ವದಿಸಿ, ಭೂಸುರೋತ್ತಮನಾದ ಕೌತ್ಸನು ತನ್ನ ಗುರುವಿನ ಸನ್ನಿಧಾನವನ್ನು ಕುರಿತು ತೆರಳಿದನು. ಮಹಾರಾಜನೂ ಮುನಿಯ ಆಶೀರ್ವಾದದಿಂದ,ಪ್ರಾಣಿವರ್ಗವು ಪ್ರಭಾಕರನಿಂದ ಬೆಳಕನ್ನು ಪಡೆಯುವಹಾಗೆ, ಸ್ವಲ್ಪ ಕಾಲದಲ್ಲಿಯೇ ಸುಪುತ್ರನನ್ನು ಪಡೆದನು.

ರಘು ಧರ್ಮಪತ್ನಿಯು-ಕುಮಾರಸ್ವಾಮಿಗೆಣೆಯೆನಿಸಿದ ಸುಕುಮಾರನನ್ನು ಬ್ರಹ್ಮನೇ ದೇವತೆಯಾಗಿರುವ ಅಭಿಜಿತ್ತೆಂಬ ಮುಹೂರ್ತದಲ್ಲಿ ಹಡೆದಳು, ಅದರಿಂದ ತಂದೆಯು-ಬ್ರಹ್ಮನಾಮವಾದ ಅಜ ಎಂಬ ಹೆಸರಿನಿಂದಲೇ ತನ್ನ ಮಗನಿಗೆ ನಾಮಕರಣವನ್ನು ಮಾಡಿದನು. ಆ ತಂದೆಯ ಹೊರವಾದ ಆಕಾರ, ಆತನಂತೆಯೇ ಶೌರ್ಯ, ಸ್ವಾಭಾವಿಕವಾದ ಎತ್ತರವೂ ತಂದೆಯ ಹಾಗೆಯೇ ಇದ್ದುದರಿಂದ, ಆ ಕುಮಾರನು ದೊಡ್ಡ ದೀಪದಿಂದ ಹತ್ತಿಸಿದ ಸಣ್ಣ ದೀಪದಹಾಗೆ ಸರ್ವಪ್ರಕಾರದಿಂದಲೂ ತನಗೆ ಕಾರಣನಾದ ತಂದೆಗಿಂತ ಬೇರೆನಿಸಲಿಲ್ಲ, ಹೀಗೆ ಕೆಲವುಕಾಲ ಕಳೆಯಲು, ಅಜಕುಮಾರನು-ವಿಧಿಯನ್ನನುಸರಿಸಿ, ಗುರುಗಳಿಂದ ವಿದ್ಯೆಗಳನ್ನೆಲ್ಲ ಕಲಿತನು. ಪರೆಯಬ್ ಹೊರವಿನಿಂದ ಹೊಮ್ಮಿ ಬಲು ಸೊಗಯಿಸುವಂತಾದನು, ರಾಜ್ಯಲಕ್ಷ್ಮಿಯು-ವಿಶೇಷವಾದ ಅಭಿಲಾಷೆಯುಳ್ಳವಳಾದರೂ, ಸ್ಥಿರಚಿತ್ತಳಾದ ಕನ್ಯೆಯು - ತನ್ನ ತಂದೆಯ ಅಪ್ಪಣೆಯನ್ನು ನಿರೀಕ್ಷಿಸುವಂತೆ, ಅಜನ ಕೈಹಿಡಿಯಲು ರಘುವಿನ ಅಣತಿಯನ್ನು ಇದಿರುನೋಡುತಲಿದ್ದಳು.

ತರುವಾಯ - ಅಜನ ಸುಗುಣಗಳು ಕರ್ಣಾಕರ್ಣಿಕವಾಗಿ ವಿದರ್ಭದೇಶಗಳ ರಾಜನಾದ ಭೋಜನ ಕಿವಿಯನ್ನು ಹೊಕ್ಕುವು. ಆತನು -

ತನ್ನ ತಂಗಿಯಾದ ಇಂದುಮತಿಗೆ ಸ್ವಯಂವರ ಮಹೋತ್ಸವವನ್ನು ಬೆಳಸ ಬೇಕೆಂದು ಬಯಸಿ, ಅಜಕುಮಾರನನ್ನು ಕರೆತರಲಿಕ್ಕೆ ಆಪ್ತನಾದ ದೂತ ನನ್ನು ಕಳುಹಿಸಿದನು. ರಘುವು - ಭೋಜನ ವಾರ್ತಾಹರನಿಂದ ಸುದ್ದಿ ಯನ್ನು ತಿಳಿದನು, ಸಂಬಂಧವನ್ನು ಬೆಳಸಲಿಕ್ಕೆ ಭೋಜನು ಅರ್ಹನೆಂದು ಭಾವಿಸಿದನು, ತನ್ನ ಕುಮಾರನೂ ಪಾಣಿಗ್ರಹಣಕ್ಕೆ ತಕ್ಕವನಾಗಿರುವ ನೆಂದು ಚಿಂತಿಸಿದನು, ಆಮೇಲೆ - ಅನುಕೂಲವಾದ ಸಲಕರಣೆಗಳನ್ನೆಲ್ಲ ಅಣಿಮಾಡಿಕೊಟ್ಟು, ತನಯನನ್ನು ತಕ್ಕ ಪಡೆಯೊಡನೆ ಭೋಜ ರಾಜಧಾ ನಿಯನ್ನು ಕುರಿತು ಕಳುಹಿಸಿಕೊಟ್ಟನು. ಆ ರಾಜಕುಮಾರನಿಗೆ ಪ್ರಯಾಣ ಸಮಯದಲ್ಲಿ ಇಳಿದುಕೊಂಡ ಸ್ಥಳಗಳೊಳಗೆ ನಟ್ಟ ಗುಡಾರಗಳಲ್ಲಿ ದೇಶದಿಂದ ಬಂದ ರಾಜಾರ್ಹವಾದ ಪದಾರ್ಥಗಳಿಂದಲೇ ಸಮಸ್ತ ಉಪ ಚಾರಗಳೂ ನಡೆದುವಲ್ಲದೆ, ವನದಲ್ಲಿ ಬೆಳೆದ ಪದಾರ್ಥಗಳಿಂದಲ್ಲ. ಆದ ಕಾರಣ, ಟಂಕಿ (ಮಜಲು) ಗಳೆಲ್ಲವೂ ಉಪವನ ವಿಹಾರಗಳಂತೆಯೇ ಆಗಿದ್ದುವು. ಹೀಗೆ - ದೊರೆಮಗನು ಪಯಣದಮೇಲೆ ಪಯಣವನ್ನು ಬೆಳಸಿ, ನರ್ಮದಾ ನದಿಯ ತಡಿಯೊಳಿಳಿದನು, ಅದುವರೆಗೆ ಸೇನೆಯೆಲ್ಲ ಬಳಲಿತು, ದಳದ ಧ್ವಜಗಳ ತುದಿಯ ಬಟ್ಟೆಗಳೆಲ್ಲ ಧೂಳಿಯಿಂದ ಮಲಿನ ಗಳಾದುವು, ಆ ಹೊಳೆಯ ದಡದಲ್ಲಿಯೇ ಬೀಡುಬಿಟ್ಟಿತು. ಪ್ರವಾಹ ದಮೇಲೆ ಹರಿದು, ತುಂತುರುಗಳನ್ನು ಹೊತ್ತು, ಹೊಂಗೆಯ ಮರಗಳೊ ಳಗೆ ನುಗ್ಗಿ ಒರುತಲಿರುವ ತಂಗಾಳಿಯು ಬೀಸುತಲಿದ್ದಿತು. ಇದಿರಿಗೆ ಹರಿಯುತಲಿರುವ ಪ್ರವಾಹದ ಮೇಲುಗಡೆಯಲ್ಲಿ ಬಂದೇ ಕಡೆಯೊಳಗೆ ಗುಂಪಾಗಿ ದುಂಬಿಗಳು ಹಾರಾಡುತಲಿದ್ದುವು, ಅದರಿಂದ - ನೀರಿನಲ್ಲಿ ಕಾಡಾನೆಯೊಂದು ಮುಳುಗಿರುವುದೆಂದು ಸೂಚಿತವಾಗುತಲಿದ್ದಿತು ಸ್ವಲ್ಪ ಹೊತ್ತಿನಲ್ಲಿಯೇ ಗಜವು ಮೇಲಕ್ಕೆದ್ದು ಕಾಣಿಸಿಕೊಂಡಿತು ನೀರಿನಿಂದ ಮದಜಲಧಾರೆಯೆಲ್ಲ ತೊಳೆದುಹೋಗಿದ್ದುದರಿಂದ, ಕಪೋ ಲವು ನಿರ್ಮಲವಾಗಿ ಕಾಣಬಂದಿತು. ಮೇಲುಗಡೆ ಹತ್ತಿದ್ದ ಕಾವಿ ಮೊದಲಾದ ಕಲ್ಲಿನಬಣ್ಣವು ಚೆನ್ನಾಗಿ ತೊಡೆದುಹೋಗಿದ್ದರೂ, ಕಪ್ಪಾ ಗಿಯೂ, ಮೇಲ್ಮುಖವಾಗಿಯೂ ಕಾಣಬರುವ ಗೆರೆಗಳನ್ನೊಳಗೊಂಡು, ಕಲ್ಲಿನ ಪೆಟ್ಟಿನಿಂದ ಚಕ್ಕೆಗಳೆದ್ದಿರುವ ಕೊಂಬುಗಳಿಂದ ಋಕ್ಷವತ್ತೆಂಬ ಪರ್ವತ ಪ್ರಾಂತದಲ್ಲಿ ಗೂಟಾಡಿದ್ದುದನ್ನು ಸೂಚಿಸುತ್ತಲಿದ್ದಿತು. ಇದಲ್ಲದೇ

ಹಿಂದಕ್ಕೆ ಮುದುರುವ ಮತ್ತು ಮುಂದಕ್ಕೆ ನೀಡುವ ಲಾಘವವುಳ್ಳ ಸೊಂಡಿಲಿನಿಂದ, ಮುಂದೆ ಹರಿಯುವ ದೊಡ್ಡದೊಡ್ಡ ತೆರೆಗಳನ್ನು ಬಡಿದೊಡೆಯುತ್ತಾ, ಗಜಶಾಲೆಯ ಬಾಗಿಲಿಗೆ ಅಡ್ಡವಾಗಿ ಹಾಕಿರುವ ಅಗುಳಿಯನ್ನೊಡೆವುದರಲ್ಲಿ ಪ್ರವರ್ತಿಸಿರುವುದರಂತೆ ತೋರುತ್ತಲಿದ್ದಿತು. ಬಳಿಕ ಬೆಟ್ಟಕ್ಕೆಣೆಯಾದ ಆ ದ್ವಿರದವು - ಪಾವಸೆಯ ಪೊದೆಯನ್ನು ಎದೆಯಿಂದ ಸೆಳೆಯುತ್ತಾ, ಮೊದಲು ತಳ್ಳಿದ ಜಲರಾಶಿಯನ್ನು ತಡಿಗೆ ಕಳುಹಿ, ತರುವಾಯ ತಾನೂ ಬಂದಿತು. ಆ ತೋರವಾದ ಕಾಡಾನೆಗೆ ನೀರಿನೊಳಗೆ ಮುಳುಗಿದ್ದ ಕ್ಷಣಕಾಲಮಾತ್ರವೇ ವಿಶಾಲವಾದ ಕಪೋಲಗಳಲ್ಲಿ ಶಾಂತವಾಗಿದ್ದ ಮದಜಲಧಾರೆಯು ನಾಡಾನೆಗಳನ್ನು ನೋಡಿದ ಮಾತ್ರದಲ್ಲಿ ಮರಳಿ ಹರಿಯತೊಡಗಿತು.

ಏಳಿಲೆ ಬಾಳೆಗಿಡಗಳ ಹಾಲಿನಂತೆ ವಾಸನೆಯುಳ್ಳ ಆ ಮದಜಲದ ಕಂಪನ್ನು ವಾಸಿಸಿದ ಕೂಡಲೇ, ದಳದಲ್ಲಿರುವ ದ್ವಿಪಗಳು ಮಾವಟಿಗರ ಕ್ರೂರವಾದ ಪ್ರಯತ್ನವನ್ನೆಲ್ಲ ಅತಿಕ್ರಮಿಸಿ, ಓಡಲಿಕ್ಕೆ ಮೊದಲಿಟ್ಟುವು. ಕಟ್ಟನ್ನು ಹರಿದು, ನೊಗಗಳನ್ನು ತಳ್ಳಿ, ಕುದುರೆಗಳು ಪಲಾಯನವಾದುವು, ತೇರುಗಳ ಅಚ್ಚು ಮುರಿಯಿತು, ರಥಗಳು ಉರುಳುವಾಗ ಮೇಲೆ ಕುಳಿತಿದ್ದ ಹೆಂಗಸರಿಗೆ ಅಪಾಯವಾಗದಂತೆ ಭಟರು ಕಾಪಾಡಿಕೊಂಬುದು ಬಲು ಕಷ್ಟವಾಯಿತು, ಹೀಗೆ- ಆ ಆನೆಯಿಂದ ಪಡೆಯೆಲ್ಲ ಕಲ್ಲೋಲವಾಯಿತು. ತಡೆಯಿಲ್ಲದೆ ಮಿತಿಮೀರಿ ಹಸ್ತಿಯು ಮೇಲೆ ನುಗ್ಗುತ್ತಿರುವ ಸುದ್ದಿಯು ಅಜಕುಮಾರನಿಗೆ ತಿಳಿಯಿತು. ಅತಿಕ್ರಮಿಸದಂತೆ ಅದನ್ನು ಹಿಂದಿರುಗಿಸಬೇಕೆಂದು ನೆನೆದನು ಹೆದೆಯನ್ನು ಹೇರಳವಾಗಿ ಸೆಳೆಯದೆ, ಅದರ ಶಿರದಮೇಲೆ ಮೃದುವಾದ ಪೆಟ್ಟು ಬೀಳುವಂತೆ ಸರಳನ್ನು ಎಚ್ಚನು. ಕಾಳಗವನ್ನುಳಿದವೇಳೆಯಲ್ಲಿ ಕರಿಯನ್ನು ಕೊಲ್ಲಬಾರದೆಂದು ಕುಮಾರನು ಕೇಳಿದ್ದನು. ಶರದಪೆಟ್ಟು ತಗಲಿದ ಮಾತ್ರದಲ್ಲಿಯೇ ದಂತಿಯ ದರ್ಶನವಿಲ್ಲವಾಯಿತು, ಮುಗಿಲಿನಲ್ಲಿ ಕಾಂತಿರಾಶಿಯೊಂದು ನೆಲೆಗೊಂಡಿತು, ಆ ಪ್ರಭಾಮಂಡಲದ ನಡುವೆ ತೇಜೋಮಯವಾದ ಆಕಾರವೊಂದು ಅಕಸ್ಮಾತ್ತಾಗಿ ಕಾಣಬಂದಿತು ಅದು ಬಲು ಕಮನೀಯವಾಗಿದ್ದಿತು, ಶಿಬಿರದವರೆಲ್ಲ ನೋಡಿ ಬಲು ಅಚ್ಚರಿಗೊಂಡರು.

ಬಳಿಕ - ಆಕಾಶಚರವಾದ ಆ ವ್ಯಕ್ತಿಯು ತನ್ನ ಮಹಿಮೆಯಿಂದ ಕೈಸೇರಿರುವ ಕಲ್ಪತರುಕುಸುಮಗಳನ್ನು ಕುಮಾರನ ಶಿರದಮೇಲೆ ಮಳೆಗರೆದು, ಮುಗುಳುನಗೆಯ ಬೆಳಕಿನಿಂದ ತನ್ನೆದೆಯ ತೋರವಾದ ಮುತ್ತಿನ ಹಾರಗಳನ್ನು ಬೆಳಗಿಸುತ, ಬಲು ಜಾಣತನದಿಂದ ಮಾತನಾಡತೊಡಗಿತು—

ಎಲೈ ಅರಗುವರನೆ! ಮತಂಗನೆಂಬ ಮಹಾಮುನಿಯೊರ್ವನುಂಟು, ನಾನೊಂದುವೇಳೆ ಆತನ ಬಳಿಯಲ್ಲಿ ಹೆಮ್ಮೆಯನ್ನು ತೋರಿದೆನು, ಆತನಿಗೆ ಸಿಟ್ಟು ಹತ್ತಿತು, ಮತಂಗನು ಮತಂಗಜದ ರೂಪವನ್ನು ಪಡೆವಂತೆನ್ನನ್ನು ಶಪಿಸಿದನು, ಅಂದಿನಿಂದ ಆ ರೂಪದಲ್ಲಿದ್ದೆನು, ನಾನು ಪ್ರಿಯದರ್ಶನನೆಂಬ ಗಂಧರ್ವ ರಾಜಕುಮಾರನು, ನನ್ನನ್ನು ಪ್ರಿಯಂವದನೆಂದು ಕರೆಯುತ್ತಾರೆ, ಶಾಪಗ್ರಸ್ತನಾದ ಆ ನಾನು ತಪೋಧನನ ಅಡಿದಾವರೆಗಳಿಗೆರಗಿ, ಪರಿಹಾರವನ್ನು ಕರುಣಿಸಬೇಕೆಂದು ಕೇಳಿಕೊಂಡೆನು, ಮುನಿಯು ತಾಳ್ಮೆಯಿಂದ ಮೃದುವಾದನು, ಬೆಂಕಿಬಿಸಲುಗಳ ಸೋಂಕಿನಿಂದ ಬಿಸಿಯುಂಟಾದರೂ, ನೀರಿಗೆ ಶೈತ್ಯವೇ ಸ್ವಾಭಾವಿಕವಾದ ಗುಣವಲ್ಲವೆ ? ಅಂತು ಶಾಂತನಾದ ತಪೋನಿಧಿಯು -" ಇಕ್ಷ್ವಾಕುಕುಲ ಕುಮಾರನಾದ ಅಜನು ಎಂದು ನಿನ್ನ ಶಿರವನ್ನು ಅಲಗಿನಿಂದ ಭೇದಿಸುವನೋ, ಅಂದೇ ನಿನ್ನ ಸ್ವರೂಪವನ್ನು ಮಹಿಮೆಯೊಂದಿಗೆ ಪಡೆವೆ" ಎಂದು ನನಗೆ ಪರಿಹಾರ ಸಮಯವನ್ನು ಸೂಚಿಸಿದ್ದನು. ಬಹುಕಾಲದಿಂದ ನಿನ್ನ ಬರವನ್ನು ಬಯಸಿ, ಇದಿರುನೋಡುತ್ತಿದ್ದ ನನ್ನಾ ರೂಪವು-ಸತ್ವಗುಣ ಸಂಪನ್ನನಾದ ನಿನ್ನಿಂದ ಪರಿಹರವಾದುದು. ಶಾಪಾಂತವನ್ನಾಂತೆನು, ನಿನ್ನಿಂದ ಪ್ರಿಯವನ್ನು ಪಡೆದ ಈ ನಾನು ನಿನಗೆ ಪ್ರತಿಪ್ರಿಯವನ್ನು ಮಾಡದೆ ಹೋದರೆ, ನನ್ನೀಪದವು ವಿಪದವಾಗುವುದಲ್ಲವೆ ? ಆದಕಾರಣ ನನ್ನಲ್ಲಿ ಸಮ್ಮೋಹನವೆಂಬ ಒಂದು ಅಸ್ತ್ರವುಂಟು, ಅದನ್ನು ತೊಡವುದಕ್ಕೂ, ತಡೆವುದಕ್ಕೂ ಮಂತ್ರಭೇದವಿದೆ, ಮತ್ತು - ಅದಕ್ಕೆ ಗಂಧರ್ವನೇ ದೇವತೆ, ಇದರ ಪ್ರಯೋಗದಿಂದ ಹಗೆಗಳಿಗೆ ಪ್ರಾಣಹಿಂಸೆಯೂ ಆಗುವುದಿಲ್ಲ, ಜಯವೂ ಕರಗತವಾಗಿರುವುದು. ಈ ಅಸ್ತ್ರವನ್ನು ಮಂತ್ರವತ್ತಾಗಿ ನೀನು ಪರಿಗ್ರಹಿಸು, ಇದೇ ನಿನ್ನ ಉಪಕಾರಕ್ಕೆ ಪ್ರತ್ಯುಪಕಾರವೆಂದು ಭಾವಿಸು. ಪ್ರಾಣಹರಣದಲ್ಲುದ್ಯುಕ್ತನಾದ ಈ ನಾನು ಪ್ರತಿಪ್ರಿಯವನ್ನು ಹೇಗೆ

ಪರಿಗ್ರಹಿಸಲಿ ? ಎಂದು ನಾಚಿಕೆಗೊಳ್ಳಬೇಡ, ನೀನು ವರಳನ್ನಿಡುವಾಗ ಸ್ವಲ್ಪಕಾಲ ತಾಳ್ಮೆಯಿಂದ ದಯಾಳುತೆಯನ್ನು ತೋರಿ, ಮೃದುವಾಗಿಯೂ ಪ್ರಯೋಗಿಸಿ ಇದ್ದೀಯೆ. ನಾನಾಗಿ ಪ್ರಾರ್ಥಿಸುತ್ತಿರುವಲ್ಲಿ ನೀನು ತಿರಸ್ಕಾರದ ಕ್ರೌರ್ಯವನ್ನು ತೋರಬಾರದು ಎಂದನು.

ಬಳಿಕ - ಹಾಗೆಯೇ ಆಗಲೆಂದು ಸಮ್ಮತಿಸಿ, ಸೋಮನಂತೆಸೆವ ಅಜಕುಮಾರನು - ಸೋಮಸುತೆಯಾದ ನರ್ಮದೆಯ ಪಾವನ ಜಲದಲ್ಲಿ ಆಚಮನಮಾಡಿ, ಉತ್ತರಾಭಿಮುಖನಾಗಿ, ಶಾಪಪರಿಹಾರದಿಂದ ಪ್ರಿಯವನ್ನು ಪಡೆದ ಪ್ರಿಯಂವದನಿಂದ ಪ್ರತಿಪ್ರಿಯವಾಗಿ ಅಸ್ತ್ರಮಂತ್ರವನ್ನು ಪರಿಗ್ರಹಿಸಿದನು. ಹೀಗೆ ದೈವವಶದಿಂದ ದಾರಿಯಲ್ಲಿ ಸಂಧಿಸಿದ ಅವರೀರ್ವರಿಗೂ ಕಾಕತಾಳೀಯ ನ್ಯಾಯದಿಂದ ಸಖ್ಯವು ಕಲೆಯಿತು. ಹಾಗೆ ಸೇರಿದ್ದ ಅವರಿಬ್ಬರಲ್ಲಿ ಪ್ರಿಯಂವದನು ಕುಬೇರೋದ್ಯಾನವನ್ನು ಕುರಿತೂ, ಅಜಕುಮಾರನು ಭೋಜನಗರಿಯನ್ನು ಕುರಿತೂ ಪ್ರಯಾಣವನ್ನು ಬೆಳಸಿದರು. —

ಅಜಕುಮಾರನು ರಾಜಧಾನಿಯ ಸಮೀಪಕ್ಕೆ ಬಂದನೆಂಬ ಸುದ್ದಿಯು ವಿದರ್ಭರಾಜನಿಗೆ ತಿಳಿಯಿತು, ಅವನ ಆಗಮನದಿಂದ ಅತಿ ಹರ್ಷಿತನಾದನು, ಮೂಡಿ ಬೆಳಗುತಲಿರುವ ಚಂದಿರನನ್ನು ಕಂಡು ತೆರೆಗಳಿಂದುಬ್ಬಿ ಮೆರೆಯುವ ಕಡಲಿನಂತೆ ಅರಗುವರನನ್ನು ಇದಿರ್ಗೊಂಡನು. ಭೋಜನಾಣತಿಯನ್ನು ಶಿರದೊಳಾಂತ ಅಧಿಕಾರಿಗಳು ವಿಧೇಯರಾಗಿ ಬಿಡಾರವನ್ನು ತೋರಿದರು. ಆ ರಾಜಭವನದ ಮುಂದಣ ಜಗುಲಿಯ ಇಕ್ಕೆಲದಲ್ಲಿಯೂ ಮಂಗಳಕರವಾದ ಪೂರ್ಣಕುಂಭಗಳನ್ನಿಟ್ಟಿದ್ದರು. ಪ್ರಶಸ್ತಿಸಿದ ಆ ಅರಮನೆಯನ್ನು ಅರಸುಕುಮಾರನು ಹೊಕ್ಕುದು ಬಾಲ್ಯಕ್ಕಿಂತ ಎರಡನೆಯದಾದ ಪ್ರಾಯವನ್ನು ಪಂಚಬಾಣನು ಪ್ರವೇಶಿಸುವಂತಿದ್ದಿತು. ಅಜನು ಆ ದಿವ್ಯಭವನದಲ್ಲಿ ಅಂದಿನ ದಿನವನ್ನು ಸುಖವಾಗಿ ಕಳೆದನು, ರಾತ್ರಿಯಾಗಲು ರಾಜಾರ್ಹವಾದ ಭೋಜನವನ್ನು ತೀರಿಸಿಕೊಂಡನು, ದಿವ್ಯ ಹಂಸತೂಲಿಕಾ ತಲ್ಪದಲ್ಲಿ ಪವಳಿಸಿದನು. ಆದರೆ - ಸ್ವಯಂವರಾರ್ಥವಾಗಿ ರಾಜಕುಮಾರನನ್ನು ಕರೆತರಿಸಿರುವ ಮನೋಹರವಾದ ಕನ್ಯಾರತ್ನವನ್ನು ಪಡೆಯಲು ಬಯಸುತಲಿರುವ ಅಜಕುಮಾರನ ನಯನಗಳನ್ನು ನಿದ್ರೆಯು, ಇವನ ಅಂತರಂಗವನ್ನು ಅರಿಯಲು ಅಸಮರ್ಥಳಾದ

ಅರಸಿಯಂತೆ ಬಹಳ ಹೊತ್ತಿನಮೇಲೆ ಇದಿರ್ಗೊಂಡಿತು. ಇರುಳೂ ಕಳೆದು, ಬೆಳಕು ಹರಿಯುತ ಬಂದಿತು. ರತ್ನಕರ್ಣಕುಂಡಲಗಳಿಂದ ಕುಮಾರನ ಬಲಿತ ಭುಜಗಳೆರಡೂ ಒತ್ತಲ್ಪಟ್ಟದ್ದವು. ಸುಪ್ಪತ್ತಿಗೆಯ ಮೇಲು ಹಾಸಿಗೆಯಲ್ಲಿ ಅಂಗರಾಗವೆಲ್ಲ ತೊಡೆದು ಹೋಗಿದ್ದಿತು. ಇನ್ನೇನು ಎಚ್ಚರವಾಗುವ ಸಮಯ, ಅಷ್ಟುಹೊತ್ತಿಗೆ, ವಯಸ್ಸಿನಲ್ಲಿ ಓರಗೆಯವರಾದ ವಂದಿಕುಮಾರರು ಪ್ರಜ್ಞಾಶಾಲಿಯಾದ ಪಾರ್ಥಿವಾತ್ಮಜನನ್ನು ಸ್ತುತಿಪಾಠಗಳಿಂದ ಎಚ್ಚರಗೊಳಿಸ ತೊಡಗಿದರು —

ಮತಿವಂತರೊಳಗುತ್ತಮನೆನಿಸಿದ ಎಲೈ ಮಹಾರಾಜನಂದನನೇ! ಮಂಚವನ್ನು ಬಿಟ್ಟು ಎಚ್ಚರಗೊಳ್ಳು, ಬ್ರಹ್ಮನು - ಈ ಭೂಮಿಯ ಹೊರೆಯನ್ನು ಎರಡು ಪಾಲನ್ನೇ ಮಾಡಿರುವನು, ಅವುಗಳೊಳಗೆ ಒಂದರ ತುದಿಯನ್ನು ಬಲು ಎಚ್ಚರಿಕೆಯಿಂದಿರುವ ನಿಮ್ಮ ತಂದೆಯು ಹೆಗಲಿನಿಂದ ಹೊತ್ತಿರುವನು, ಮತ್ತೊಂದುಕಡೆಯ ಭಾರಕ್ಕೆ ನಿನ್ನ ಭುಜವೇ ಊತಲ್ಲವೆ? ನೀನಾವರೆ ನಿದ್ರೆಗೆ ವಶನಾದೆ, ಕಾಂತಿಲಕ್ಷ್ಮಿಯ ನ್ನಪೇಕ್ಷಿಸಿಗೆ, ಅಬಲೆಯಾದ ಆಕೆಗೂಡುತಪ್ಪಿತು, ನಿನ್ನ ಮುಖಕ್ಕೆಣೆಯಾದ ಬೇರೊಂದಾಸರೆಯನ್ನು ತಡಕಬೇಕಾಯಿತು, ನಿನ್ನಗಲಿಕೆಯಿಂದುಂಟಾದ ಮನಸ್ಸಿನ ನೋವನ್ನು ತಾಳಲಾರದೆ ಹೋದಳು, ಸ್ವಲ್ಪ ಸಿಟ್ಟುಹತ್ತಿದಂತಾಯಿತು, ಚಿತ್ತವು ತುಸ ಒಂಡಾಯಿತು, ಚಂದ್ರನನ್ನಾಶ್ರಯಿಸಿ ಕಿಂಚಿತ್ತು ಸಮಾಧಾನವನ್ನು ಪಡೆದುಕೊಳ್ಳುತಲಿದ್ದಳು, ಆ ಚಂದಿರನೂ ಪಡುವಣ ದೆಸೆಗಧೀನನಾಗುವಹಾಗಾಯಿತು, ನಿನ್ನ ಮೊಗದ ಸೊಬಗು ಅವನಲ್ಲಿಯೂ ಕಡಮೆಯಾಗುತ ಬಂದಿತು, ಅದರಿಂದಲೆ ನೀನೆಚ್ಚತ್ತು ದಿಕ್ಕಿಲ್ಲದ ಆ ಲಕುಮಿಗಾಸರೆಯನ್ನು ನೀಡು. ದಯೆಮಾಡು. ಅಂತಾ ಲಕ್ಷ್ಮಿಯನ್ನು ಪರಿಗ್ರಹಿಸಿದರೆ,—ಒಂದೇ ಹೊತ್ತಿನಲ್ಲಿ ಸಮವಾಗಿ ಅರಳಿ, ಥಳಥಳನೆ ಹೊಳೆಯುತ ಚಲಿಸುತಲಿರುವ ಅಂದವಾದ ಕರಿಯ ಗುಡ್ಡನ್ನೊಳಗೊಂಡಿರತಕ್ಕ ನಿನ್ನ ಕಣ್ಣೂ, ಅಲುಗುತಲಿರುವ ದುಂಬಿಯನ್ನುಳ್ಳ ತಾವರೆಯೂ, ಒಂದರೊಡನೊಂದು ಹೋಲಿಕೆಯನ್ನು ಪಡೆದು ಬೆಳಗಲಿ. ಮುಂಜಾನೆಯ ಮೆಲ್ಲಲರು-ತರುಗಳೊಳಗೆ ತೊಟ್ಟಿನಿಂದ ಕಳಚಿ ಉದಿರುವಲರನ್ನು ಸೆಳೆಯುತಲಿವೆ, ಕೆಂಬಣ್ಣದೆಳಬಿಸಿಲಿನಿಂದರಳುತಲಿರುವ ತಾವರೆಯೊಡನೆ ಕಲೆಯುತಲಿವೆ. ಆದಕಾರಣ ಸ್ವಾಭಾವಿಕವಾಗಿರುವ

ನಿನ್ನ ಮುಖಮಾರುತದ ಸುವಾಸನೆಯೊಡನೆ ಸಾಮ್ಯವನ್ನು ಪರಗುಣದಿಂದ ಪಡೆಯಲೆಳಸುವಂತೆ ಕಾಣಬರುವುದು. ತರುಗಳಲ್ಲಿನ ಕೆಂಪಾದ ತಳಿರುಗಳ ನಡುವೆಬಿದ್ದು, ಬಿಳುಪಾದ ಮುತ್ತಿನ ಕಾಂತಿಯನ್ನೊಳಗೊಂಡಿರುವ ಹಿಮದ ಹನಿಯು ನಿನ್ನಯ ಚೆಲುವಾದ ಕೆಳತುಟಿಯಲ್ಲಿ ಹಲ್ಲಿನ ಬೆಳಕಿನಿಂದೊಡಗೂಡಿರುವ ವಿನೋದದ ಮುಗುಳುನಗೆಯಂತ ಬೆಳಗುತಲಿದೆ. ಹೇರಳವಾದ ತಾಪಕ್ಕೆ ಗಣಿಯಾಗಿರುವ ರವಿಯು-ಮೂಡಣ ಮುಗಿಲಿನಲ್ಲಿ ಮೂಡುವುದಕ್ಕಿಂತ ಮೊದಲೇ ಅರುಣನು ಕತ್ತಲನ್ನು ತರಿದೋಡಿಸುತಲಿದಾನೆ. ಎಲೈ ವೀರನೇ! ಕಾಳಗಗಳೊಳಗೆ ನೀನು ಮುಂದಾಳಾಗುತಿರುವಲ್ಲಿ ನಿಮ್ಮ ತಂದೆಯು ಸ್ವತಃ ಹಗೆಗಳನ್ನು ಸದೆ ಬಡಿವುದುಂಟೆ? ಯೋಗ್ಯರಾದ ಮಕ್ಕಳಲ್ಲಿ ಆಡಳಿತದ ಭಾರವನ್ನೆಲ್ಲ ಹೊರಿಸಿರತಕ್ಕ ಯಜಮಾನರಿಗೆ ವ್ಯವಹಾರದ ಖೇದವಿರುವುದೆ? ಎರಡು ಪಕ್ಕಗಳಲ್ಲಿಯೂ ಕ್ರಮವಾಗಿ ಮಲಗಿ ನಿದ್ದೆಯನ್ನು ಕಳೆದು, ನಿನ್ನ ಆನೆಗಳು ಗಲಗಲನೆ ಸದ್ದುಮಾಡುತಲಿರುವ ಸರಪಣಿಗಳನ್ನು ಎಳೆದಾಡುತ ಎಚ್ಚರಗೊಳ್ಳುತಲಿರುವುವು. ಎಳೆ ಬಿಸಿಲಿನ ಸಂಬಂಧದಿಂದ ಕೆಂದಾವರೆಯ ಮೊಗ್ಗೆಗಳಂತಿರುವ ಆ ಆನೆಗಳ ಕೋಡುಗಳು - ಕೆಂಗಾವಿಗಲ್ಲಿನಿಂದೊಡಗೂಡಿರುವ ಬೆಟ್ಟದ ಭಾಗದಂತೆ ಕಂಗೊಳಿಸುತಲಿವೆ. ಎಲೈ ವನಜನಯನನೆ! ನೀಳವಾದ ಗೂಡಾರಗಳೊಳಗೆ ಕಟ್ಟಿರುವ ವನಾಯುದೇಶದ ವಾಜಿಗಳು ನಿದ್ರೆಯಿಂದೆದ್ದು, ಇದಿರಿಗೆ ಅಣಿಮಾಡಿರುವ ಉಪ್ಪಿನ ಗಡ್ಡೆಗಳನ್ನು ತಮ್ಮ ಉಸಿರಿನ ಬಿಸಿಯಿಂದ ಮಲಿನಗೊಳಿಸುತಲಿರುವುವು. ನೀನು ಸಿಂಗರಿಸಿಕೊಂಡಿರುವ ಪುಷ್ಪಹಾರಗಳಲ್ಲಿನ ಹೂಗಳು ಬಾಡುತ ಬಂದುದರಿಂದ, ರಚನೆಯಲ್ಲಿ ಬಿಡುವು ಕಾಣಬರುತಲಿದೆ, ತೋರವಾದ ದೀವಿಗೆಗಳು ತಮ್ಮ ಸುತ್ತಲಿರುವ ಕಾಂತಿಮಂಡಲದಲ್ಲಿ ಹೊಳವು ತಗ್ಗಿದುದರಿಂದ ಕಳೆಗುಂದಿವೆ, ಮುದ್ದುಮುದ್ದಾಗಿ ಮಾತನಾಡುವ ನಿನ್ನ ಪಂಜರದ ಅರಗಿಳಿಯು-ನಿನ್ನ ಎಚ್ಚರಿಕೆಗಾಗಿ ಹೇಳುತಲಿರುವ ನಮ್ಮ ನುಡಿಗಳನ್ನು ಅನುಸರಿಸಿ ತಾನೂ ನುಡಿಯುತಲಿದೆ:—

ಇಂತು-ಬಾಂದೊರೆಯ ಪುಳಿನದೊಳು ಪವಳಿಸಿದ್ದ ಸುಪ್ರತೀಕವೆಂಬ ಸುರಗಜವು ಮದವೇದಚಿಕೆಗಳ ನಿನದಂಗಳಿಂ ದೆಚ್ಚರಂಗೊಂಬಂತೆ

ರಘುನಂದನನು ವಂದಿಪುತ್ರರಭಿನಂದನ ವಚನಂಗಳಿಂದೆ ಸುಪ್ಪತ್ತಿಗೆಯಿಂದುಪ್ಪವಳಿಸಿದನು.

ಬಳಿಕ - ಮುದ್ದಾದ ನಿದ್ದೆಗಣ್ಣಿನ ಆ ಅರಗುವರನು ಮುಂಜಾನೆಯೊಳು ಮಾಡಬೇಕಾದ ಅನುಷ್ಠಾನಗಳನ್ನು ವಿಧಿಯನ್ನನುಸರಿಸಿ ನೆರವೇರಿಸಿಕೊಂಡು, ಜಾಣ್ಮೆಯಿಂದ ಉಚಿತವಾದ ಉಡಿಗೆತೊಡಿಗೆಗಳಿಂದ ಸಿಂಗರವಂ ತಾಳ್ದು, ಅರಸುಮಕ್ಕಳಿಂದ ಅಲಂಕೃತವಾಗಿರುವ ಸ್ವಯಂವರ ಮಂಟಪವಲ್ಲಿನ ರಾಜಸಮಾಜಕ್ಕೈತಂದಂ.

— ಇಂತು ಅಜಸ್ವಯಂವರಾಭಿಗಮನವೆಂಬ ಐದನೆಯ ಅಧ್ಯಾಯಂ —



ಶ್ರೀಃ.

## ಷಷ್ಠಾಧ್ಯಾಯಂ.



**ಸೂಚನೆ॥** ವರಣದ ಶರಣದಿ ತರುಣರ
ನರಗುವರಿಗೆ ನೆರೆ ಸುನಂದೆ ತೋರುತೆ ಸರಿದಳ್ ।
ವರಿಸಲ್ ವಧು ರಘುಜಾತನ
ನರಗುವರರ್ ಕರುಬಿ ಮುಯ್ಯೊಳರೆಯರಾಗಿರ್ದರ್ ॥

ಸಮನಂತರದಲ್ಲಿ ಸ್ವಯಂವರ ಮಂಟಪವು ಸುರಚಿರ ಶೃಂಗಾರಗಳಿಂದ ಸಿರಿಗೆ ತವರ್ಮನೆಯಂತೆ ಸಿದ್ಧವಾಗಿದ್ದಿತು. ಸಕಲೋಪಚಾರಗಳಿಂದ ಸಜ್ಜುಗೊಳಿಸಿರುವ ಸಿಂಹಪೀಠಗಳಲ್ಲಿ ಬಗೆಬಗೆಯ ಉಡಿಗೆ ತೊಡಿಗೆಗಳ ಸಿಂಗರಗಳಿಂದ ಸುರರ ಸೊಬಗನ್ನು ಸೂರೆಗೊಂಬ ಸರ್ವಾಂಸಹಾಧಿಪ ಸುಕುಮಾರರು ಸೊಲ್ಲುಗೊಂಡು ಕುಳಿತಿರುವುದನ್ನು ರಘುಕುಮಾರನು ಕಂಡನು. ಈತನಾ ಕಲ್ಯಾಣ ಮಂಟಪವನ್ನು ಹೊಕ್ಕಕೂಡಲೇ, ಅರಸುಮಕ್ಕಳೆಲ್ಲ ಅವಲೋಕಿಸಿದರು. ರತಿಯು ವಿನಯಪ್ರಾರ್ಥನೆಯಿಂದ ಪರಮೇಶ್ವರನು ಅನುಗ್ರಹಿಸಲು, ತನ್ನ ಶರೀರವನ್ನು ಪಡೆದು ಬಂದಿರುವ ಕಂದರ್ಪನಂತೆ ಕಕುತ್ಸ್ಥ ಕುಲಕುಮಾರನು ಕಾಣಬಂದನು. ಕೂಡಲೆ ನರನಾಥ ನಂದನರ ಮನವು - ಇಂದುಮತಿಯಲ್ಲಿ ಆಶೆಯನ್ನು ತೊರೆಯಿತು

ಕೂಡಲಿಕ್ಕೆ ಉಚಿತವಾದ ಪೀಠವನ್ನು ವಿದರ್ಭರಾಜನೇ ಮರ್ಯಾದೆಯಿಂದ ತೋರಿಸನು, ಕೇಸರಿಕಿಶೋರವು ಕಲ್ಲಿನ ಪಂತಗಳ ಹಾದಿಯಿಂದ ಬೆಟ್ಟದ ತುದಿಯನ್ನು ಹೇಗೋಹಾಗೆ, ಅಜಕುಮಾರನು ಸೋಪಾನಗಳ ಸರಣಿಯಿಂದ ಮಂಚವನ್ನೇರಿದನು. ಬಗೆಬಗೆಯದೆನಿಸಿ, ಬೆಲೆಯಿಲ್ಲದ ಬಣ್ಣಗಳಿಂದೊಡಗೂಡಿರುವ ರತ್ನಗಳನ್ನು ಕೆತ್ತಿರತಕ್ಕ ಪೀಠದಲ್ಲಿ ಬಲು ಬಿಂಕದಿಂದ ಕುಳಿತ ಅಜಕುಮಾರನು ನವಿಲ ಬೆನ್ನಿನಮೇಲೆ ಕುಳಿತಿರುವ ಕುಮಾರಸ್ವಾಮಿಯ ಬೆಡಗನ್ನಾಂತು, ಊಹಿಸಿ ತಿಳಿಯುವಷ್ಟು ಕಾಂತಿಯಿಂದ ಸಂಪನ್ನನಾಗಿದ್ದನು. ರವಿಯೊಬ್ಬನಾದರೂ ಕೊಳದೊಳಗಣ ಅಲೆಗಳೊಳಗೆಲ್ಲ ಕಂಗೊಳಿಸುವಂತೆ, ಪ್ರಭಾತಿಶಯದಿಂದ ನೋಡಲಸದಳವೆನಿಸಿದ ಆ ಅಜಕುಮಾರನ ಸ್ವರೂಪವು ರಾಜನ್ಯಕುಮಾರರ ಶ್ರೇಣಿಗಳೊಳಗೆಲ್ಲ ಸಾವಿರಾರು ಒಗೆಯಾಗಿ ಹರಡಿತು ಅದರಿಂದ ಮೋಡಗಳ ಸಾಲುಗಳೊಳಗೆ ವ್ಯಾಪಿಸಿರುವ ಮಿಂಚಿನಂತೆ ರಾರಾಜಿಸುತಲಿದ್ದಿತು. ಬೆಲೆಯಿಲ್ಲದ ಬಗೆಬಗೆಯ ಉಡಿಗೆಗಳನ್ನಳವಟ್ಟು, ಶ್ರೇಷ್ಠತರಗಳೆನಿಸಿದ ಸಿಂಹಾಸನಗಳನ್ನಲಂಕರಿಸಿರುವ ಬಾಹುಜವೀರರೊಳಗೆ, ಕಲ್ಪತರುಗಳ ಮಧ್ಯವಲ್ಲಿ ಪಾರಿಜಾತ ವೃಕ್ಷದಂತೆ ರಘುನಂದನನೊಬ್ಬನೇ ತೇಜೋವಿಶೇಷದಿಂದ ವಿರಾಜಿಸುತಲಿದ್ದನು. ಆ ಸಭಾಮಂಟಪದಲ್ಲಿ ನೆರೆದಿರುವ ಪುರಜನರ ದೃಷ್ಟಿಸಮೂಹವು ಕ್ಷತ್ರಿಯಕುಮಾರರನ್ನೆಲ್ಲ ತೊರೆದು, ಅಜಕುಮಾರನಲ್ಲಿಯೇ ಒಟ್ಟಿಗೆ ಇಳಿಯಿತು. ಹೂತಿರುವ ಮರಗಳನ್ನೆಲ್ಲ ಬರಿದಾಗಿ ಮಾಡಿ, ದುಂಬಿಗಳ ಹಿಂಡು ಕಾಡಾನೆಯ ಮದಜಲಧಾರೆಯಿಂದ ತುಂಬಿರುವ ಗಲ್ಲದಲ್ಲಿ ಗುಂಪಾಗಿ ಬಂದು ಕುಳಿತಿದ್ದಿತು.

ಆ ಬಳಿಕ — ವಂಶಾವಳಿಗಳನ್ನೆಲ್ಲ ಚೆನ್ನಾಗಿ ಬಲ್ಲ ಹಳಬರಾದ ವಂದಿಗಳು — ಸೂರ್ಯಚಂದ್ರವಂಶವರಸರ ಚರಿತ್ರೆಗಳನ್ನೆಲ್ಲ ಕ್ರಮವಾಗಿ ಹೊಗಳತೊಡಗಿದರು. ಗಮಗಮಿಸುತಲಿರುವ ಪರಿಮಳದ ಧೂಪವು ಎಲ್ಲೆಲ್ಲಿಯೂ ಹರಡಿಕೊಂಡಿತು, ಧ್ವಜಪಟಗಳನ್ನೆಲ್ಲ ಸಾಲಾಗಿ ಎತ್ತಿ ಹಿಡಿದರು. ಮಯೂರ ನೃತ್ಯಕ್ಕೆ ನಿಮಿತ್ತವಾದ ಗುಡುಗಿನಂತೆ ದಿಗಂತಗಳಲ್ಲಿ ಮಂಗಳಶಂಖರಾವಗಳು ಮೊರೆಯುತಲಿದ್ದುವು, ಮಂಗಳವಾದ್ಯಘೋಷವು ನಾಲ್ಕುಕಡೆಗಳಲ್ಲಿಯೂ ತುಂಬಿ ಇದ್ದಿತು. ಪತಿಯನ್ನು ವರಿಸುವುದರಲ್ಲಿ

ಸಿದ್ಧಳಾದ ಮದವಣಿಗಿತ್ತಿಯು ವಿವಾಹೋಚಿತವಾದ ಮಂಗಳಾಲಂಕಾರಗಳಿಂದ ಶೋಭಿಸುತ್ತಾ, ಮನುಷ್ಯರಿಂದ ತೆರಳತಕ್ಕ ಪಲ್ಲಕ್ಕಿಯನ್ನೇರಿ, ಗೆಳತಿಯರ ಮಿತವಾದ ಪರಿವಾರದಿಂದ ಬೆಳಗುತ, ಕಲ್ಯಾಣಮಂಟಪದೊಳಗೆ ಇಕ್ಕೆಲಗಳಲ್ಲಿಯೂ ಮಂಚಗಳಮೇಲೆ ಅಂದವಾಗಿ ಕುಳಿತಿರುವ ಅರಸುಮಕ್ಕಳ ನಡುವಣ ರಾಜಮಾರ್ಗದಲ್ಲಿ ಹೊರಟು ಬಂದಳು. ಬ್ರಹ್ಮನ ಸುಂದರವಾದ ಸೃಷ್ಟಿಯೊಳಗೆ ಮೊಟ್ಟಮೊದಲನೆಯದೆನಿಸಿ, ನೂರಾರುಮಂದಿ ನರದೇವಕುಮಾರರ ನೋಟಗಳಿಗೆಲ್ಲ ಒಂದೇ ಗುರಿಯಾಗಿರುವ ಆ ಕನ್ಯಾಪದಾರ್ಥದಲ್ಲಿ, ಮಹಾರಾಜನಂದನರೆಲ್ಲ ತಂತಮ್ಮ ಮನಗಳಿಂದ ಬಂದಿಳಿದರು. ಪೀಠಗಳಲ್ಲಿ ತಮ್ಮ ಮೈಗಳಿಂದ ಮಾತ್ರವೇ ಇರುತ್ತಿದ್ದರು.

ತರುಗಳ ತಳಿರುಗಳ ಹೊಳಪುಗಳ ಹಾಗೆ, ಕನ್ಯಾರತ್ನವಾದ ಆ ಇಂದುಮತಿಯನ್ನು ಬಯಸುತಲಿರುವ ಭೂಪತಿಗಳ ಪ್ರೇಮಗಳಿಗೆ ಮುಂಜರಿವ ದೂತಿಯಂತಿರುವ ಶೃಂಗಾರಚೇಷ್ಟೆಗಳು ಬಗೆಬಗೆಯಯಗಿ ಹರಡತೊಡಗಿದುವು; ಅವುಗಳ ವಿವರವೇಂಕೆಂದರೆ:—

ಅವರೊಳಗೊಬ್ಬ ರಾಜಕುಮಾರನು - ಅಂದವಾಗಿ ಅರಳಿರುವ ಒಂದು ತಾವರೆಯ ಹೂವನ್ನು ಕಾವಿನಲ್ಲಿ ಹಿಡಿದು, ವಿನೋದಕರವಾಗಿ ಸುತ್ತಾಡಿಸುತಲಿದ್ದನು, ಅದರ ಎಸಳುಗಳು ಮೇಲೆ ಹಾರಾಡುತಲಿರುವ ದುಂಬಿಗೆ ತಾಗುತಲಿದ್ದುವು, ಹೂವಿನೊಳಗಡೆಯ ರಜವು ಮಂಡಲಾಕಾರವಾಗಿ ನಿಲ್ಲುತಲಿದ್ದಿತು. ಇದರಿಂದ ಎಲೆ ಕನ್ಯೆಯೇ! ನೀನು ನನ್ನ ಕೈಹಿಡಿದರೆ ನಿನ್ನೊಡನೆ ಹೀಗೆ ವಿನೋದದಿಂದ ವಿಹರಿಸುವೆನು ಎಂಬುದು ಆತನ ಮನೋಗತ. ಕಯ್ಯನ್ನಲ್ಲಾಡಿಸುವ ಅಂಗಚೇಷ್ಟೆಯನ್ನು ತೋರುವುದು ಅಪಲಕ್ಷಣವೆಂದು ಇಂದುಮತಿಯ ಆಶಯ.

ಮತ್ತೊಬ್ಬ ವಿಲಾಸಿಯಾದ ವಿಶ್ವಂಭರಾಧಿಪತಿಯು - ರತ್ನಗಳನ್ನು ಕೆತ್ತಿದ್ದ ಬಾಪುರಿಯನ್ನು ತೊಟ್ಟದ್ದನು, ಕೊರಳಿಗೆ ಹಾಕಿಕೊಂಡಿದ್ದು, ಎದೆಯಮೇಲೆ ಜೋಲಾಡುತಲಿದ್ದ ಹೂವಿನಹಾರವು, ಅಥವಾ (ವಲ್ಲಿಯು) ಹೆಗಲಿನಿಂದ ಕೆಳಗೆಸರಿದು, ಭುಜಕೀರ್ತಿಯ ತುದಿಗೆ ತಗಲಿಕೊಂಡಿದ್ದಿತು, ಅದನ್ನು ಕಯ್ಯಿಂದೆತ್ತಿ ಮೋರೆಯನ್ನು ಓರೆಗೆ ತಿರುಗಿಸಿ, ಮೊದಲಿದ್ದಂತೆ ಸವರಿಸಿಕೊಳ್ಳುತಲಿದ್ದನು; ಎಲೆ ಕಾಂತೆಯೇ! ನೀನು ನನ್ನನ್ನು ಒಪ್ಪಿದರೆ

ಈ ಹೂವಿನ ಹಾರವನ್ನು ಹಿಡಿದಂತೆ ವಿಲಾಸದಿಂದ ನಿನ್ನ ಕೈಹಿಡಿಯುವೆನು ಎಂದು ಆತನ ಅಭಿಮತ; ತಲೆಯನ್ನು ಡೊಂಕುಮಾಡುವುದರಿಂದ ಮರೆಮಾಡಿಕೊಳ್ಳತಕ್ಕ ಆವುದೋ ಒಂದು ಡೊಂಕು ಇವನಲ್ಲಿರುವುದು, ಇವನು ಅನರ್ಹನು ಎಂಬುದು ಆಕೆಯ ಆಶಯ.

ಬೇರೊಬ್ಬ ಅರಸು - ಓರೆನೋಟದ ಸೊಬಗುಳ್ಳವನಾಗಿ, ಕಾಲ್ಬೆರಳುಗಳ ತುದಿಯನ್ನು ತುಸಮುಡಿಸಿ, ಚಿನ್ನದ ಕಾಲುಮಣೆಯನ್ನು ಹೆಜ್ಜೆಯಿಂದ ಕೆರೆಯುತಲಿದ್ದನು, ಬೆರಳನುಗುರಿನ ಹೊಳವು ಅತ್ತಲಾಗಿ ಹರಡುತಲಿದ್ದಿತು; ಎಲೌ ವಧುವೇ! ನೀನು ಹೆರರನ್ನು ತೊರೆದು ಇಲ್ಲಿಗೆ ಬಂದು ನನ್ನನ್ನು ವರಿಸು ಎಂದು ಅವನ ಇಷ್ಟ; ಕಾಲಿನಿಂದ ನೆಲವನ್ನು ಗೀಚುವುದು ನಿರ್ಭಾಗ್ಯಲಕ್ಷಣವೆಂದು ಇಂದುಮತಿಯ ಅಭಿಪ್ರಾಯ.

ಇನ್ನೊಬ್ಬ ನರನಾಥನು - ತಾನು ಕುಳಿತಿರುವ ಮಂಚದ ಒರಗುದಿಂಡಿನಮೇಲೆ ಎಡದ ತೋಳನ್ನಿಟ್ಟು, ಎತ್ತರವಾದ ಹೆಗಲುಳ್ಳವನಾಗಿ, ಹಿಂದಕ್ಕೆ ಓರೆಯಾಗಿ ತಿರುಗಿಕೊಂಡು, ತನ್ನ ಮಿತ್ರನೊಡನೆ ಮಾತನಾಡತೊಡಗಿದನು, ಅವನ ಕೊರಳನಲ್ಲಿನ ನೀಳವಾದ ಹೂವಿನ ಹಾರದ ತುದಿಯು ಎಡದ ಟೊಂಕದ ಕೆಳಗಡೆಯಲ್ಲಿ ಜೋಲಾಡುತಲಿದ್ದಿತು, ಎಲೌ ಸುನತಿ! ನೀನು ನನ್ನ ಪಾಣಿಗ್ರಹಣವನ್ನು ಮಾಡಿಕೊಂಡರೆ ನಿನ್ನನ್ನು ನನ್ನ ಈ ಎಡದ ತೊಡೆಯಮೇಲೆ ಕುಳ್ಳಿರಿಸಿಕೊಂಬೆನು ಎಂಬುದು ಅವನ ಭಾವ, ಕಾಳಗದಲ್ಲಿ ಹಗೆಗಳದಿರಾದರೆ ಇವನು ಹಿಮ್ಮೆಟ್ಟುವ ಹೇಡಿ ಎಂಬುದು ಇಂದುಮತಿಯ ಅಂತರಂಗ.

ಮಗುದೊಬ್ಬ ತರುಣ ಮಹೀಪಾಲನು-ವಿಲಾಸವತಿಯರಾದ ವನಿತೆಯರು ತಮ್ಮ ಕಿವಿಗಳಿಗಲಂಕರಿಸಿಕೊಳ್ಳುವ ಗೇದಗೆಯ ಹೂವಿನ ಬಿಳಿಯ ರೇಕನ್ನು ಹಿಡಿದು, ವಿಲಾಸಾರ್ಥವಾಗಿ ಉಗುರುಗಳಿಂದ ಸೀಳುತಲಿದ್ದನು. ಎಲೌ ಲಲನೆಯೇ! ನನ್ನನ್ನು ವಿವಾಹಮಾಡಿಕೊಂಡರೆ, ಇಂತಹ ಸುಕುಮಾರವಾದ ಕುಸುಮಗಳನ್ನು ನಿನಗೆ ಅಲಂಕರಿಸುವೆನು ಎಂದು ಆತನ ಹೃದಯಗತ, ಇವನು ನಖದಿಂದ ತೃಣವನ್ನು ಛೇದಿಸುವ ದುರ್ಲಕ್ಷಣನು ಎಂಬುದು ರಾಜಪುತ್ರಿಯ ರಹಸ್ಯ.

ಅನ್ಯನಾದ ಒಬ್ಬ ಅವನಿಪಾಲನು - ಧ್ವಜದಂತೆಸೆವ ಗೆರೆಯಿಂದೊಡಗೂಡಿ, ಕೆಂದಾವರೆಯಂತೆ ಕಂಗೊಳಿಸುವ ಕರತಲದಿಂದ ರತ್ನಗಳನ್ನು ಕೆತ್ತಿರತಕ್ಕ ಉಂಗುರಗಳ ಹೊಳವನ್ನೊಳಗೊಂಡಿರುವ ಪಗಡೆಯ ಕಾಯಿಗಳನ್ನು ಹಾರಿಸುತಲಿದ್ದನು, ನೀನು ನನಗೆ ಪ್ರಿಯವಲ್ಲಭೆಯಾದರೆ ನಿನ್ನೊಡನೆ ಪರಮಪ್ರೀತಿಯಿಂದ ಪಗಡೆಯನ್ನಾಡುವೆನೆಂದು ನರನಾಥನ ಅಭಿಪ್ರಾಯ, ಇವನು ಸಪ್ತವ್ಯಸನಿಗಳಲ್ಲೊಬ್ಬನಾದ ಅಕ್ಷವ್ಯಸನಿ, ಅಯೋಗ್ಯನು ಎಂದು ಇಂದುಮತಿಯ ಭಾವ.

ತದಿತರನೊಬ್ಬನು - ತನ್ನ ತಲೆಯಮೇಲಣ ಕಿರೀಟವು ಸ್ವಸ್ಥಾನದಲ್ಲಿ ಸರಿಯಾಗಿ ಕುಳಿತಿದ್ದರೂ, ಸ್ಥಲ ತಪ್ಪಿ ಸರಿದುಹೋಗಿರುವುದನ್ನು ಸರಿಮಾಡಿಕೊಳ್ಳುವವನಂತೆ, ಕರತಲದಿಂದ ಅಲುಗಿಸಿ ಹೊಂದಿಸಿಕೊಳ್ಳುತ್ತೊಡಗಿದ್ದನು, ಆ ಮಕುಟಕ್ಕೆ ಕೆತ್ತಿದ್ದ ವಜ್ರಮಣಿಗಳ ಹೊಳವು ಬೆರಳುಗಳ ಸಂದುಗಳಲ್ಲಿ ಬೆಳಗುತಲಿದ್ದತು. ಎಲೌ ಸುಂದರಾಂಗಿಯೇ! ನೀನೆನ್ನ ಒಡತಿಯಾದರೆ ಈ ಕಿರೀಟದಂತೆ ನಿನ್ನನ್ನು ತಲೆಯಮೇಲೆ ಕೂಡಿಸಿಕೊಂಡು ಲಾಲಿಸುವೆನು. ಮತ್ತು ನಿನ್ನ ಹೊರೆಯೇ ನನಗೆ ತೋರುವುದಿಲ್ಲ ಎಂಬುದು ಆ ಭೂರಮಣನ ಬಯಕೆ, ಶಿರದಮೇಲೆ ಕರವನಿಟ್ಟು ಕುಳಿತಿರುವುದು ದುರ್ಲಕ್ಷಣವೆಂದು ಇಂದುಮತಿಯ ಅಭಿಪ್ರಾಯ.

ಹೀಗೆ - ಕೆಲವುಮಂದಿ ಅರಸುಮಕ್ಕಳು - ತಂತಮ್ಮ ಮನೋಭಾವಗಳನ್ನು ಕರಚರಣಾದಿ ಚೇಷ್ಟೆಗಳಿಂದ ವ್ಯಕ್ತಗೊಳಿಸುತ್ತಿದ್ದರು, ರಾಜಕುಮಾರಿಯು ಅವರಲ್ಲಿರುವ ದೋಷಗಳನ್ನರಿತು ಮುಂದರಿದಳು. ಆ ಇಂದುಮತಿಯ ಮುಂದೆ ಮರ್ಯಾದೆಯಿಂದ ದಾರಿತೋರುತ ಬರುತಲಿರುವ ಸುನಂದೆಯೆಂಬ ದ್ವಾರಪಾಲಿಕೆಯೋರ್ವಳು - ಆ ದೊರೆಮಕ್ಕಳ ವಂಶಾವಳಿಯ ಚರಿತ್ರೆಯನ್ನೆಲ್ಲ ಚೆನ್ನಾಗಿ ಬಲ್ಲವಳು, ಉತ್ತಮ ಪುರುಷನಂತೆ ಮಾತನಾಡುವುದರಲ್ಲಿ ಬಲು ಜಾಣೆ, ಆ ಅರಗುವರಿಯನ್ನು ರಾಜಮಂಡಲದಲ್ಲಿ ಕುಳಿತಿರುವ ಮಗಧರಾಜನ ಬಳಿಗೆ ಕರೆತಂದು ಕೈತೋರಿ ಇಂತೆಂದಳು:—

ಎಲೌ ರಾಜನ್ಯಕುಮಾರಿಯೇ! ಇದಕೊ, ಈತನು - ಶರಣಾಗತರಾದವರನ್ನು ಕೈಬಿಡದೆ ಅಭಯದಾನವನ್ನು ಮಾಡಿ ಕಾಪಾಡತಕ್ಕವನು, ಬಹು ಗಂಭೀರವಾದ ಸ್ವಭಾವದವನು, ಮಗಧದೇಶಗಳ ಮಹಾರಾಜನೆ

ಪದವಿಯಲ್ಲಿ ನೆಲೆಗೊಂಡಿದ್ದಾನೆ, ಪರಿಪಾಲನ ಪರಿಪಾಟಿಯಿಂದ ಪ್ರಜೆಗಳ ಮನೋರಂಜನಮಂ ಮಾಡಿ, ಬಲು ಜಾಣನೆನಿಸಿ, ಉತ್ಕರ್ಷದ ಹೆಸರುವಾಸಿಯನ್ನು ಪಡೆದಿದ್ದಾನೆ, ಪರರನ್ನು ತಪಿಸುವಂತೆ ಮಾಡುವುದರಿಂದಲೇ ಈ ರಾಜನು ಪರಂತಪನೆಂದು ಅನ್ವರ್ಥನಾಮವನ್ನು ಪಡೆದಿರುವನು. ಈ ಲೋಕದಲ್ಲಿ ಇನ್ನೂ ಬಹುಮಂದಿ ಇಳೆಯಾಣ್ಮರಿರುವರು, ಆದರೂ ಅವರೆಲ್ಲ ಹಾಗಿರಲಿ, ಅಶ್ವಿನಿ ಮೊದಲಾದ ನಕ್ಷತ್ರಗಳೂ, ಇತರ ತಾರೆಗಳೂ, ಗ್ರಹಗಳೂ ಕಂಗೊಳಿಸುತಲಿದ್ದರೂ, ಇರುಳು - ಚಂದಿರನೊಬ್ಬನಿಂದಲೇ ಪ್ರಶಸ್ತವಾದ ತೇಜಸ್ಸನ್ನುಳ್ಳುದೆಂದು ಹೆಸರುವಾಸಿಯನ್ನು ಪಡೆದಿರುವಹಾಗೆ, ಈ ರಾಜನೋರ್ವನಿಂದಲೇ ಈ ಭೂಮಿಯನ್ನೂ (ರಾಜನ್ವತಿ) ಪ್ರಶಸ್ತ ರಾಜನುಳ್ಳುದನ್ನಾಗಿ ಪ್ರಾಜ್ಞರೆಲ್ಲ ಹೇಳುತ್ತಾರೆ. ಈ ಪರಂತಪ ರಾಜನು ಸಾಧಾರಣನಲ್ಲ, ಎಡೆಬಿಡದೆ ಯಾವಾಗಲೂ ಯಾಗಗಳನ್ನು ಮಾಡುತಲೇ ಇರುವುದರಿಂದ ಸಾಸಿರಗಣ್ಣನಾದ ಬಿಡುಗಣ್ಣರೊಡೆಯನನ್ನು ಅನವರತವೂ ತನ್ನ ಯಜ್ಞವಾಟದೊಳಿರುವಂತೆ ಮಾಡಿರುವನು, ಆ ಇಂದ್ರನ ಅಗಲಿಕೆಯಿಂದಲೇ ಸ್ವರ್ಗದಲ್ಲಿ ಇಂದ್ರಾಣಿಯು ತನ್ನ ಬಿಳುಪಾದ ಕಪೋಲತಲಗಳಲ್ಲಿ ಜೋಲಾಡುತಲಿರುವ ಮುಂಗೂದಲನ್ನು ಪಿರಗಟ್ಟಿ ಕಲ್ಪತರು ಕುಸುಮಗಳಿಂದ ಸಿಂಗರಿಸಿಕೊಳ್ಳದಿರುವಳು. ಎಲೌ ಸುಮಂಗಲಿಯೆ! ಈ ಪೊಡವಿಯಾಣ್ಮನೊಡನೆ ನೀನು ಪಾಣಿಗ್ರಹಣ ಮಂಗಳವನ್ನು ಒಪ್ಪುವುದಾದರೆ ಬಹು ಚೆನ್ನಾಗಿರುವುದು, ಪ್ರಯಾಣ ಕಾಲದಲ್ಲಿ ಈತನಸಂಗಡ ತೆರಳಿ, ರಾಜಧಾನಿಯಾದ ಪಾಟಲೀಪುರವನ್ನು ಪ್ರವೇಶಿಸುವಲ್ಲಿ ಆ ಪುಷ್ಪಪುರದ ರಾಜವೀಧಿಯ ಇಕ್ಕೆಲದ ಉಪ್ಪರಿಗೆಗಳ ಕಿಟಕಿಗಳೊಳಗೆ ಸಾಲಾಗಿ ನಿಲ್ಲುವ ರಮಣೀಮಣಿಯರ ಕಣ್ಣಾಗಳಿಗೆಲ್ಲ ನಿನ್ನ ನೋಟದಿಂದ ಹಬ್ಬವನ್ನು ಮಾಡಬಹುದು. ಎಂದೀಪ್ರಕಾರ ವಿವರಿಸುತಲಿರುವ ಸುನಂದೆಯ ನುಡಿಯನ್ನು ಕೇಳಿದಳು, ಇಂದುಮತಿಯು ಅವನನ್ನು ನೋಡಿದಳು, ಮನವು ಭಾವಶೂನ್ಯವಾಯಿತು, ಮುಡಿಯೊಳು ಮುಡಿದಿರುವ ಎಳೆಗರಿಕೆಯಿಂದೊಡಗೂಡಿದ ಹಿಪ್ಪೆಯ ಹೂವಿನಸರವು ತುಸ ಸಡಿಲವಾಗುತ್ತಿರಲು, ಆತನನ್ನು ಕುರಿತು ಏನೊಂದು ಮಾತನ್ನೂ ಆಡದೆ, ಕೃಶಾಂಗಿಯಾದ ಆ ಯುವತಿಯು ನಮಸ್ಕಾರ ಕ್ರಿಯೆಯಿಂದಲೇ ತಿರಸ್ಕರಿಸಿ ಮುಂಬರಿದಳು. ಅವಳ ಮನೋಭಾವವನ್ನರಿವುದರಲ್ಲಿ

ಬಲುಜಾಣೆಯಾದ ಸುನಂದೆಯೇ-ಮಾನಸ ಸರೋವರದೊಳಗೆ ಗಾಳಿಯ ಪೆಟ್ಟಿನಿಂದ ಹುಟ್ಟಿದ ತರೆಗಳ ಸಾಲು ನೀರಿನಲ್ಲಿ ತೇಲುವ ಅಂಚೆಯನ್ನು, ಒಂದು ತಾವರೆಯಿಂದ ಮತ್ತೊಂದು ತಾವರೆಯಬಳಿಗೆ ಕೊಂಡೊಯ್ಯು ವಂತೆ, ರಾಜಪುತ್ರಿಯಾದ ಇಂದುಮತಿಯನ್ನು, ಬೇರೊಬ್ಬ ರಾಜಕುಮಾ ರನಬಳಿಗೆ ಕರೆದೊಯ್ದು ಇಂತೆಂದಳು:—

ಎಲೌ ಕೋಮಲಾಂಗಿಯೇ! ಈತನು – ಅಂಗದೇಶದ ಅರಸು, ಒಂದುವೇಳೆ ಇಂದ್ರನಿಗೆ ಸಹಾಯ ಮಾಡಲೋಸುಗ ಸ್ವರ್ಗಕ್ಕೆ ತೆರಳಿ ದ್ದನು, ಆಗ-ಈತನ ಹರೆಯದ ಸೊಬಗನ್ನು ಕಂಡ ಸುರಾಂಗನೆಯರೂ ಮನಸೋತು ಈತನನ್ನು ಬಯಸಿದರು, ಮತ್ತು – ಒಂದಾನೊಂದು ಕಾಲದಲ್ಲಿ ದಿಗ್ಗಜಗಳೆಲ್ಲ ಶಾಪಕ್ಕೊಳಗಾಗಿ, ಕಾಡಾನೆಗಳಾಗಿ ಹುಟ್ಟಿ, ನಾಡುಗಳಿಗೆಲ್ಲ ಕೇಡನ್ನೆಸಗುತ ಬಂದುವು. ಆಗ – ದೇವರ್ಷಿಗಳು ಗಜಶಾಸ್ತ್ರವನ್ನು ಬರೆದಿಟ್ಟರು, ಈ ಅಂಗನಾಥನು ಆ ಶಾಸ್ತ್ರವನ್ನೆಲ್ಲ ಕಲಿತು ಆನೆಗಳ ಹಾವಳಿಯನ್ನೆಲ್ಲ ಅಡಗಿಸಿದುದಲ್ಲದೆ, ಅವುಗಳನ್ನೆಲ್ಲ ಶಿಕ್ಷಿಸಿ ಸ್ವಾಧೀನಕ್ಕೆ ತಂದನು, ಈಗಲೀತನು ಭೂಮಿಲ್ಲಿದ್ದರೂ ಸ್ವರ್ಭೂಮಿಯ ಸೌಭಾಗ್ಯವನ್ನು ಅನುಭವಿಸುತ ಭೂದೇವೇಂದ್ರನೆನಿ ಸಿನಾನೆ. ಮತ್ತೊಂದುವೇಳೆ-ದಿಗ್ವಿಜಯಾರ್ಥವಾಗಿ ಹೊರಟು, ಹಗೆಯ ರಸರನೆಲ್ಲ ಸದೆಬಡಿದನು, ಅರಸಿತಿಯರು ತೋರವಾದ ಮುತ್ತುಗಳಂತೆ ಕಂಗೊಳಿಪ ಕಣ್ಣೀರಿನ ಹನಿಗಳನ್ನು ಎದೆಗಳಮೇಲೆ ಎಡೆಬಿಡದೆ ಕರೆಯು ತಲಿದ್ದರು. ಇದರಿಂದ ಈ ವಂಗನಾಥನು ಆ ಅಂಗನೆಯರ ಕೊರಳ ಗ ಳಲ್ಲಿ ಶೋಭಿಸುವ ದಾರವಿಲ್ಲದೆಯೇ ಮುತ್ತಿನ ಹಾರಗಳನ್ನು ಸಮರ್ಪಿಸು ವಂತಿದ್ದಿತು. ಎಲೌ ಕಲ್ಯಾಣಿಯೇ! ಸಿರಿಸರಸತಿಯರಿಬ್ಬರೂ ನಿತ್ಯವೈ ರಿಗಳಾಗಿದ್ದರೂ, ದಾಕ್ಷಿಣ್ಯಪರನಾದ ಈತನಲ್ಲಿ ಗೆಳೆತನದಿಂದ ನೆಲೆಗೊಂಡಿ ರುವರು. ಕಾಂತಿ, ಸತ್ಯ ಪ್ರಿಯವಾಕ್ಕು, ಇವುಗಳೊಡನೆ ಮೂರನೆಯವ ಳೆನಿಸಿ, ಒಡನಾಡಿಯಾಗಿರಲು ನೀನೇ ತಕ್ಕವಳು ಎಂದಳು. ತರುವಾಯ ಕುಮಾರಿಯು – ಆ ಅಂಗರಾಜನಲ್ಲಿದ್ದ ದೃಷ್ಟಿಯನ್ನು ಕೆಳಗೆ ಇಳಿಸಿ, ಗೆಳತಿಯಾದ ಸುನಂದೆಯನ್ನು ಮುಂದರಿ ಎಂದಳು. ಆದರೆ – ಮಂಗ ಳಾಂಗನಾದ ಅಂಗನಾಥನು ಕಮನೀಯನೆನಿಸದೆ ಇರಲಿಲ್ಲ. ಸುಂದರಿ ಯಾದ ಇಂದುಮತಿಯೂ ಆತನ ಯೋಗ್ಯತೆಯನ್ನು ತಿಳಿಯಲಾರದವಳಾಗಿ

ಇರಲಿಲ್ಲ. ಆದರೂ ಆ ಕನ್ಯೆಗೆ ಆ ವರನು ರುಚಿಸದಿರಲು ಕಾರಣವೇನು? ಎಂದರೆ - ಲೋಕವು ಭಿನ್ನರುಚಿಯುಳ್ಳುದಲ್ಲವೆ ?

ಆಮೇಲೆ - ಬಾಗಿಲ ಕಾವಲುಗಾತಿಯಾದ ಸುನಂದೆಯು ಬವರಗಳೊಳಗೆ ಇದಿರಿಸುವ ಹಗೆಗಳಿಗೆ ಅಸದಳನೆನಿಸಿ, ಹೊಸದಾಗಿ ಮೂಡುವ ಚಂದಿರನಂತೆ ಬಲು ಸುಂದರನೂ ಆಗಿರುವ ಬೇರೊಬ್ಬ ಭೂಪಾಲನನ್ನು ತೋರಿ ಹೇಳತೊಡಗಿದಳು:—

ಎಲೌ ಮುಂದಯಾನೆಯಾದ ಇಂದುಮತಿಯೆ! ಇತ್ತನೋಡು:— ಈತನು ಅವಂತಿದೇಶಾಧೀಶ್ವರನು, ಆಜಾನುಬಾಹುವೆನಿಸಿರುವನು, ಬಲು ಅಗಲವಾದ ಎದೆಯುಳ್ಳವನು, ದುಂಡಾಗಿಯೂ ಬಡಕನದಿಂದೊಡಗೂಡಿಯೂ ಇರುವ ನಡುವಿಂದೆಸೆವನು. ಹಿಂದೆ - ಇನನ ಬೇಗೆಯನ್ನು ತಾಳಲಾರದೆ ಬೇಡಿಕೊಂಡ ಮಗಳ ಮಾತನ್ನು ಕೇಳಿ ವಿಶ್ವಕರ್ಮನು ಸಾಣೆಯಲ್ಲಿ ತೀಡಿದ ಬೆಂಗದಿರನಂತೆ ಬೆಳಗುತಲಿದಾನೆ. ಶಕ್ತಿತ್ರಯಸಂಪನ್ನನಾದ ಈ ಮಾರಾಯನು - ದಿಗ್ವಿಜಯಕ್ಕೆ ಹೊರಟಾಗಲೆಲ್ಲ. ಮುಂದರಿವ ವಾಜಿಗಳ ತುಳಿತದಿಂದೆದ್ದ ದೂಳಿಗಳು ಇದಿರಿಸಬೇಕೆಂದಿರುವ ಇಳೆಯಾಣ್ಮರ ಚೂಡಾಮಣಿಗಳ ತೇಜಗಳನ್ನೆಲ್ಲ ಮುತ್ತಿ, ಹುಟ್ಟಿಲ್ಲದಂತೆ ಅಡಗಿಸುತವೆ, ಮತ್ತು - ತಣ್ಗದಿರನನ್ನು ತಲೆಯೊಳಾಂತಿರುವ ಮುಕ್ಕಣ್ಣನು ಮಹಾಕಾಲವೆಂಬೆಡೆಯಲ್ಲಿ ನೆಲೆಗೊಂಡಿರುವನು. ಅಲ್ಲಿಗೆ ಬಲು ಹತ್ತಿರದಲ್ಲಿಯೇ ಈ ಅವಂತಿನಾಥನೂ ವಾಸಮಾಡುತಲಿದಾನೆ, ಆದುದರಿಂದಲೇ ಕೃಷ್ಣಪಕ್ಷದಲ್ಲಿಯೂ ಕತ್ತಲ ಕಾಟವಿಲ್ಲದ ಇರುಳುಗಳನ್ನು ತನ್ನ ಹೆಂಡಿರುಗಳೊಡನೆ ಅನುಭವಿಸುತಲಿರುವನು. ಎಲೌ ತರುಣಿಯೇ! ಸಿಪ್ರಾನದಿಯ ಅಲೆಗಳ ನಡುವೆ ಹಾಯಾಗಿ ಹರಿದುಬರುವ ವಾಯುವನ್ನು ಸೇವಿಸುತ, ಇಕ್ಕೆಲದ ತೋಟಗಳ ಸಾಲುಗಳಲ್ಲಿ ಈತನೊಡನೆ ವಿಹರಿಸಲು ನಿನ್ನ ಚಿತ್ತವು ರುಚಿಗೊಂಬುದಾದರೆ ತರುಣನಾದ ಈ ತಿರೆಯಾಣ್ಮನೊಡನೆ ಪಾಣಿಗ್ರಹಣಮಂಗಳವನ್ನು ಅನುಭವಿಸು ಎಂದ ಸುನಂದೆಯ ನುಡಿಯನಾಲಿಸಿ, ಬಂಧುಗಳೆಂಬ ತಾವರೆಗಳನ್ನು ಬೆಳಗಿಸುತ, ಹಗೆಯೆಂಬ ಕೆಸರನ್ನು ತನ್ನ ಪ್ರತಾಪದಿಂದ ಬತ್ತಿಸತಕ್ಕವನೂ ಆಗಿರುವ ಭಾಸ್ಕರನಲ್ಲಿ ಕುಮುದಿನಿಯು ಹೇಗೋಹಾಗೆ, ಆ

ಅವಂತೀಶ್ವರನಲ್ಲಿ, ಬಲು ಸುಕುಮಾರಿಯಾದಳ ಕುಮಾರಿಯೂ ತನ್ನ ಮನೋಭಾವವನ್ನು ನೆಲೆಗೊಳಿಸಲಿಲ್ಲ.

ಬಳಿಕ - ಮುಂದರಿವ ಮಂದಯಾನೆಯಾದ ಸುನಂದೆಯು ಇದಿರಿಗೆ ಭಾವಶೂನ್ಯಳಾಗಿ ನಿಂತಿರುವ ಕುಂದರದನೆಯಾದ ಇಂದುಮತಿಯನ್ನು ನೋಡಿದಳು, ಅರಳಿದ ತಾವರೆಯು ಎಸಳಿನಂತೆ ಹೊಳೆವ ಮೈಬೆಳಕು, ಸಕಲಸುಗುಣಸಂಪನ್ನೆ, ವಿಧಿಯು ಮಧುರವಾದ ಸೃಷ್ಟಿ, ಇಂತೆನಿಸಿದ ಆ ಸುಮುಖಿಯ ಭಾವವನ್ನು ಅರಿತಳು, ಹಾಗೆಯೇ ತುಸಮುಂದೆ ಅನೂಪದೇಶದ ಪ್ರತೀಪಭೂಪನ ಬಳಿಗೈತಂದು ಇಂತೆಂದಳು.

ಕುಂದದಿರುವ ಗುಣಗಳಿಂದೆಸೆವ ಓ ಇಂದುಮುಖಿ! ಕಾಳಗಗಳ ಕೇಳಿಗಳೊಳಗೆ ಸಾಸಿರ ತೋಳುಗಳ ಬಲವನ್ನು ತೋರಿ, ಸರ್ವಯಾಗಗಳನ್ನೂ ಆಚರಿಸಿ, ಹದಿನೆಂಟು ದ್ವೀಪಗಳೊಳಗೂ ಯೂಪಸ್ತಂಭಗಳನ್ನು ನಟ್ಟು, ಸಾರ್ವಭೌಮನೆನಿಸಿಕೊಂಡು, ಸರ್ವಪ್ರಜಾ ಮನೋರಂಜನಂಗೈದುದರಿಂದ ಹೆರರು ಪಡೆಯಲು ಅಸದಳವೆನಿಸಿದ ರಾಜಾ ಎಂಬ ಹೆಸರುವಾಸಿಗೆ ಭಾಗಿಯಾಗಿ, ದತ್ತಾತ್ರೇಯನಿಂದ ಯೋಗವಿದ್ಯೆಯನ್ನು ಕಲಿತು, ಬ್ರಹ್ಮವಿದನೂ ಆಗಿ, ಕೃತವೀರ್ಯ ಮಹಾರಾಜನ ಸತ್ಪುತ್ರನೆನಿಸಿದ್ದ ಕಾರ್ತವೀರ್ಯಾರ್ಜುನನನ್ನು ಕೇಳಿಬಲ್ಲೆಯಷ್ಟೆ? ಆ ಹೇಹಯರಾಜನು - ಆವ ನಾಡಿನೊಳಗೆ ಆವಮಾನವನೇ ಆಗಲಿ, ಕೆಟ್ಟ ಕೆಲಸವನ್ನು ಮಾಡಬೇಕೆಂದು ಒಗೆದುದೇ ಆದರೆ, ಆ ಕೂಡಲೇ ಬಿಲ್ಲನಾಂತು ಅವನ ಮನದೊಳಗೆ ಕಾಣಿಸಿಕೊಂಡು, ದುರಾಲೋಚನೆಯ ಸುಳಿವನ್ನೇ ಅಡಗಿಸುತಲಿದ್ದ ಧೀರನಲ್ಲವೆ? ಮತ್ತು - ಕೈಗಳೊಳಗೆ ಬಿಲ್ಲುಗಳನ್ನು ಹಿಡಿದು ಹೆದೆಯನ್ನೇರಿಸುವವರೆಗೆ ತೋಳುಗಳು ಅಲುಗದೆ ನಿಲ್ಲಲು, ಸಿಟ್ಟೇರಿ, ಕೈಹರಿಯದೆ, ಹತ್ತು ಮೋರೆಗಳಿಂದಲೂ ನಿಟ್ಟುಸಿರನ್ನು ಬಿಡುತ್ತ, ಕಟ್ಟುಗೊಳಗಾಗಿ, ಇಂದ್ರಾದಿಗಳನ್ನು ಜಯಿಸಿದ್ದ ಲಂಕಾ ಸಾರ್ವಭೌಮನಾದ ರಾವಣನೂ ಈತನ ಸೆರೆಮನೆಯೊಳಗೇ ಅಲ್ಲವೆ ತಾನಾಗಿ ದಯೆಗೆಯ್ಯುವವರೆಗೂ ಸಿಲುಕಿ ನರಳುತಲಿದ್ದನು? ಇದಕೊ, ಇದಿರಿಗೆ ಕಾಣಬರುವ ಈ ಪ್ರತೀಪನೆಂಬ ಭೂಮಿಪಾಲನು ಆ ಕಾರ್ತವೀರ್ಯ ಮಹಾರಾಜನ ಸಂತತಿಯಲ್ಲಿ ಸಮುದ್ಭವಿಸಿದವನು. ಶಾಸ್ತ್ರವಿದರೆನಿಸಿದ ಹಿರಿಯರನ್ನು ಸೇವಿಸತಕ್ಕವನು, ಅದಲ್ಲದೆ "ಲಕ್ಷ್ಮಿಯು ಬೂದಿಡೆಯಲ್ಲಿಯೂ ನೆಲೆಯಾಗಿ

ನಿಲ್ಲತಕ್ಕವಳಲ್ಲ, ಸ್ವಭಾವದಿಂದಲೇ ಬಹು ಚಪಲಳು" ಎಂಬ ಆಕೆಯ ಕೆಟ್ಟ ಹೆಸರುವಾಸಿಯನ್ನು ತೊಡೆದುಬಿಟ್ಟಿರುವನು. ಮತ್ತು - ಧುರಧೀರನಾದ ಈ ದೊರೆಯು ಆಯೋಧನದಲ್ಲಿ ಅಗ್ನಿಯನ್ನೇ ಸಹಾಯವನ್ನಾಗಿ ಪಡೆದು, ಕ್ಷತ್ರಿಯರ ಕುಲಕ್ಕೆ ಕಾಳರಾತ್ರಿಯೆನಿಸಿದ ಪರಶುರಾಮನ ಗಂಡುಗೊಡಲಿಯ ಮೊನೆಯಾದ ಮೋರೆಯನ್ನು ನೈದಿಲೆ ಹೂವಿನೇಣಿಗೆ ಎಣೆಯಾಗಿ ಎಣಿಸಿದಾನೆ. ಮಾಹಿಷ್ಮತೀ ನಗರಿಯೆಂಬ ನಾರಿಯ ಪಾಳಿಯ ಬುಡವೆಂಬ ಟೊಂಕಕ್ಕೆ ಒಡ್ಯಾಣದಂತಿರುವ, ಸುತ್ತಲೂ ಹರಿಯತಕ್ಕ ಜಲಪ್ರವಾಹದಿಂದ ರಮಣೀಯವೆನಿಸಿದ ರೇವಾನದಿಯನ್ನು ಉಪ್ಪರಿಗೆಯ ಮೇಲಣ ಕಿಟಕಿಯಿಂದ ನೋಡುತ್ತ, ಆನಂದಿಸಬೇಕೆಂಬ ಬಯಕೆಯು ನಿನಗೆ ಇದ್ದುದೇ ಆದರೆ, ಆಜಾನುಬಾಹುವಾದ ಈ ಪೊಡವಿಯಾಣ್ಮನ ತೊಡೆಯಮೇಲೆ ಲಕ್ಷ್ಮಿಯಂತೆ ಕುಳ್ಳಿರು ಎಂದಳು. ಆ ಮಾಹಿಷ್ಮತೀ ನಗರದರಸು ಬಹು ಪ್ರೀತಿಕರವೆನಿಸಿದ ದರ್ಶನವುಳ್ಳವನಾದರೂ, ಇಂದುಮತಿಯ ಮನಸ್ಸಿಗೆ ರುಚಿಸಲಿಲ್ಲ. ಶರದೃತುವಿನಲ್ಲಿ ಮೋಡಗಳ ಆವರಣವಿಲ್ಲದೆ ಚಂದ್ರನು ಪರಿಪೂರ್ಣ ಕಳೆಗಳುಳ್ಳವನಾಗಿದ್ದರೂ ಕಮಲಲತೆಗೆ ರುಚಿಸುವುದಿಲ್ಲವಲ್ಲವೆ?

ಆಹಿಂದೆ - ಸದಾಚಾರದಿಂದ ಪರಿಶುದ್ಧವೆನಿಸಿರುವ ತಾಯಿತಂದೆಗಳ ಕುಲಗಳೆರಡಕ್ಕೂ ಪ್ರಕಾಶಕನೆನಿಸಿ, ಸ್ವರ್ಗಾದಿ ಲೋಕಗಳಲ್ಲಿಯೂ ಹೊಗಳಿಸಿಕೊಳ್ಳತಕ್ಕವನಾಗಿರುವ ಶೂರಸೇನ ದೇಶಾಧೀಶ್ವರನಾದ ಸುಷೇಣನನ್ನು ತೋರಿಸಿ, ರಾಣಿವಾಸದ ಸೇವಕಳಾದ ಸುನಂದೆಯು - ಇಂದುಮತಿಯಂ ಕುರಿತು ಮರಳಿ ಹೇಳತೊಡಗಿದಳು:—

ಅನುಪಮಮತಿಯಾದ ಎಲೌ ಇಂದುಮತಿಯೆ! ಇತ್ತನೋಡು, ಈ ಪಾರ್ಥಿವನು ನೀಪವಂಶದಲ್ಲಿ ಜನಿಸಿದವನು, ವಿಧಿಯನ್ನು ಅನುಸರಿಸಿ ಯಾಗಗಳನ್ನು ಆಚರಿಸುತ್ತಿರುವವನು, ಶಾಂತವಾದ ತಪೋವನವನ್ನು ಹೊಕ್ಕಿರುವ ಗೋವ್ಯಾಘ್ರ, ಗಜಸಿಂಹ ಮೊದಲಾದ ಜಂತುಗಳು ತಮ್ಮ ಜಾತಿಸಿದ್ಧವಾದ ವೈರವನ್ನು ತೊರೆದು, ಒಂದರೊಡನೊಂದು ಗೆಳೆತನದಿಂದಿರುವಹಾಗೆ, ಈತನಲ್ಲಿ - ಜ್ಞಾನ, ಮೌನ, ಕ್ಷಮಾ, ಶಕ್ತಿ ಮುಂತಾದ ಗುಣಗಳು ಸ್ವಾಭಾವಿಕವಾದ ವಿರೋಧವನ್ನು ಬಿಟ್ಟು ಒಡನಾಡಿಗಳಾಗಿರುವುವು. ತಣ್ಣಗಿದಿರನ ಬೆಳ್ದಿಂಗಳನಂತೆ ಈತನ

ಕಾಂತಿಯು ನಯನಾನಂದಕರವೆನಿಸಿ, ತನ್ನ ಮನೆಯೊಳಗೆ ಹರಡಿ ಇದೆ. ಸಹಿಸಲಸದಳವೆನಿಸಿದ ಈತನ ಪ್ರತಾಪವಾದರೆ, ಉಪ್ಪರಿಗೆಗಳಮೇಲೆ ಹೇರಳವಾಗಿ ಹುಲ್ಲು ಬೆಳೆದಿರುವ ಹಗೆಗಳ ಪುರದೊಳಗೆ ಹರಡಿರುವುದು. ಈತನು ತನ್ನ ರಾಣಿವಾಸದ ರಮಣೀಮಣಿಯರೊಡನೆ ಕಳಿಂದ ಕನ್ಯೆಯಾದ ಯಮುನೆಯಲ್ಲಿ ಜಲಕ್ರೀಡೆಯನ್ನೆಸಗಿದಾಗ ಆ ಸುಂದರಿಯರ ಮೈಯ್ಯ ಚಂದನವೆಲ್ಲ ಕದಡಿಹೋಗುವುದು, ಆಗಲಾ ಸೂರ್ಯತನಯಳು ಈ ಸುಷೇಣ ಭೂರಮಣನ ನಗರಿಯಾದ ಮಥುರೆಯ ಬಳಿಯೊಳಿದ್ದು ಗಂಗಾಸಂಗಮವಿಲ್ಲದಿದ್ದರೂ ಸಂಗಮವನ್ನು ಪಡೆದಿರುವಂತೆ ಬಣ್ಣದಿಂದ ಕಾಣಬರುವಳು. ಮತ್ತು - ಪೂರ್ವದಲ್ಲಿ ಆ ಯಮುನೆಯೊಳಗೆ ಕಾಳಿಯವೆಂಬ ಒಂದು ಮಹಾಸರ್ಪವು ಮನೆಮಾಡಿಕೊಂಡಿದ್ದಿತು. ಗರುಡನು ಬಂದು ಅದನ್ನು ಬೆದರಿಸಿದನು, ಸುಷೇಣನು ಆ ಭೋಗಿವರನಿಗೆ ಅಭಯದಾನವನ್ನು ಮಾಡಿದುದರಿಂದ, ಅದು ಒಂದು ದಿವ್ಯರತ್ನವನ್ನು ಬಹುಮಾನವಾಗಿ ಕೊಟ್ಟಿತು, ಆ ಮಣಿಯನ್ನು, ಈತನು ವಕ್ಷಸ್ಥಲದಲ್ಲಿ ಸಿಂಗರಿಸಿಕೊಂಡು, ತನ್ನ ಸೊಬಗಿನಿಂದ, ಕೌಸ್ತುಭ ರತ್ನದಿಂದ ಅಲಂಕೃತನಾದ ಶ್ರೀಕೃಷ್ಣನನ್ನು ಲಜ್ಜೆಗೊಳಿಸುವಂತೆ ಕಾಣಬರುತ್ತಾನೆ. ಎಲೌ ರಮಣಿಯೇ! ಈ ಧರಣೀರಮಣನಾದ ತರುಣನನ್ನು ರಮಣನನ್ನಾಗಿ ಭಾವಿಸು. ಕುಬೇರೋದ್ಯಾನಕ್ಕಿಮ್ಮಡಿಯಾದ ಸೊಬಗಿನಿಂದ ಮೆರೆವ ಈತನ ಪುರೋದ್ಯಾನವಾದ ಬೃಂದಾವನದಲ್ಲಿ ಕೋಮಲವಾದ ತಳಿರುಗಳ ಮೇಲುಹಾಸಿಗೆಯನ್ನು ಪಡೆದಿರುವ ಹೂವಿನ ಸುಪ್ಪತ್ತಿಗೆಯಲ್ಲಿ ಪವಳಿಸಿ ಆನಂದಿಸಬಹುದು. ಇನೂ ಅಲ್ಲದೆ, ಅಲ್ಲಿ - ಗೋವರ್ಧನ ಪರ್ವತವುಂಟು, ಮಳೆಯ ಹನಿಗಳಿಂದ ನನದು, ಶಿಲಾಜತುವಿನ ಅಥವಾ ಕಲ್ಲುಹೂಗಳ ವಾಸನೆಯನ್ನು ಪಡೆದು, ಬೆಳಗುತಲಿರುವ ಗವಿಗಳ ಬಳಿಯಲ್ಲಿನ ಅಂದವಾದ ಬಂಡೆಗಳಮೇಲೆ ಹಾಯಾಗಿ ಕುಳಿತು, ಮಳೆಗಾಲದಲ್ಲಿ ಸಂತೋಷದಿಂದ ಕುಣಿಯುತಲಿರುವ ನವಿಲುಗಳ ನೃತ್ಯವನ್ನು ನೋಡುತ ಆನಂದಿಸಲೂ ಬಹುದು. ಎಂದ ಸುನಂದನೆಯ ವಚನವನ್ನಾಲಿಸಿ ಇಂದುಮತಿಯು ಬೇರೊಬ್ಬ ಭೂವರನಿಗೆ ಭಾರ್ಯೆಯಾಗುವುದು ಭವಿತವ್ಯತೆಯಾಗಿದ್ದರಿಂದ, ಸಾಗರದಲ್ಲಿಳಿಯಲು ಹರಿದುಹೋಗುತಲಿರುವ ಹೊಳೆಯು ದಾರಿಯಲ್ಲಿ ದೊರೆತ ಗಿರಿಯನ್ನು ಮೀರಿಹೋಗುವ ಹಾಗೆ, ಆ ನರವರನನ್ನು ದಾಟಿ ಮುಂದಕ್ಕೆ ಸರಿದಳು.

ಆದನಂತರದಲ್ಲಿ - ಅಂತಃಪುರದಲ್ಲಿನ ಕಿಂಕರಿಯಾದ ಸುನಂದೆಯು - ಇಂಗಿತವನ್ನರಿವುದರಲ್ಲಿ ಬಹು ಚತುರಳು, ಮುಂದೆ ಹೊರಟಳು, ಹೇಮಾಂಗದಾಲಂಕೃತನಾಗಿರುವ ಹೇಮಾಂಗದನೆಂಬ ಕಳಿಂಗ ದೇಶಾಧಿಪತಿಯುಬಳಿಗೆ ಬಂದು ನಿಂತಳು, ಆತನು - ಹಗೆಗಳೊಡ್ಡನ್ನೆಲ್ಲ ಗುಡ್ಡೆಗೆ ಡಹಿಸುವನು ಎಂಬುದನ್ನು ಬಲ್ಲವಳು. ಪೂರ್ಣೇಂದುವದನೆಯಾದ ಇಂದುಮತಿಯ ಕಡೆಗೆತಿರುಗಿ, ಎಲೌ ಬಾಲೆ ! ಈತನೇ ಕಲಿಂಗನಾಥನು, ಇವನನ್ನು ಹೇಮಾಂಗದನೆಂದು ಕರೆಯುತ್ತಾರೆ, ಮಹೇಂದ್ರಾದ್ರಿಗೆಣೆಯೆನಿಸಿದ ಬಾಹುಸಾರವುಳ್ಳವನು, ಮಹೇಂದ್ರಪರ್ವತಕ್ಕೂ, ಮಹೋದಧಿಗೂ ಸ್ವಾಮಿಯೆನಿಸಿರುವನು. ಅವುಗಳೇ ಈತನಿಗೆ ಗಿರಿಜಲದುರ್ಗಗಳು, ಈತನು - ದಿಗ್ವಿಜಯಕ್ಕೆ ಹೊರಡುವ ವೇಳೆಯಲ್ಲಿ ದಳದ ದಂತಾವಳಗಳು ತೆರಳುತಲಿರುವುದನ್ನು ನೋಡಿದರೆ, ಮಹೇಂದ್ರಾಚಲವೇ ಅನೇಕಾಕಾರಗಳನ್ನಾಂತು ಮುಂದೆ ತೆರಳುವಂತಿರುವುದು. ಎಲೌ ಲಲನೆ! ನಾನು ಏನ ಹೇಳಲಿ! ಈತನು ಬಿಲ್ಲಾಳುಗಳೊಳಗೆ ಮೊದಲನೆಯವನೆನಿಸಿರುವನು, ಎರಡು ಕೈಗಳಿಂದಲೂ ಹಗೆಗಳಮೇಲೆ ಅಂಬುಗಳನ್ನಿಡುವಾಗ ಹೆದೆಯನ್ನೇರಿಸುವ ಸಡಗರದಲ್ಲಿ ನೀಳವಾದ ತೋಳುಗಳೊಳಗೆ ಕರೆಗಟ್ಟಿರುವ ಕರಿಯ ಗೆರೆಗಳು ಕಾಣಬರುತಲಿವೆ. ಹಗೆಯರಸರ ಸಿರಿಯನ್ನು ಸೆರೆಹಿಡಿದು ಸೆಳೆದು ತರುವಾಗ - ಅವಳ ಕಣ್ಣುಗಳಿಂದ ಹರಿದ ಕಾಟಿಕೆಯಿಂದೊಡಗೂಡಿರುವ ಕಣ್ಣೀರಿನ ಕಾಲುವೆಗಳೋ ಎಂಬಂತೆ ತೋರಿಬರುವುವು. ಈ ರಣಧೀರನು ತನ್ನ ಪ್ರಾಸಾದದೊಳಗೆ ಸುಪ್ಪತ್ತಿಗೆಯಮೇಲೆ ಹಾಯಾಗಿ ಪವಳಿಸಿರುವಾಗ - ವಾತಾಯನದೊಳಗೆ ಹತ್ತಿರದಲ್ಲಿಯೇ ಕಡಲಿನಲೆಗಳು ಕಾಣಬರುತ್ತವೆ. ಆ ಮಹೋದಧಿಯೇ ಬಂದೊಂದು ಜಾವದ ತುದಿಯನ್ನು ಸೂಚಿಸುವ ವಾದ್ಯಧ್ವನಿಯಿಲ್ಲದೆ ತನ್ನ ಗಂಭೀರವಾದ ದನಿಯಿಂದಲೇ ಭೂವಲ್ಲಭನಿಗೆ ಬೋಧೆಯಂಗೆಯ್ಯುತಲಿರುವುದು. ಈ ಮಹಾರಾಜನನ್ನು ಮದುವೆಮಾಡಿಕೊಳ್ಳಲು ಮನವೊಪ್ಪಿದರೆ ಮುಚ್ಚಂಜೆಯ ಹೊತ್ತಿನಲ್ಲಿ ತಾಳೆಯ ಮರಗಳ ಅಲ್ಲಾಟದಿಂದ ಮರ್ಮರವೆಂಬ ಇಂಪಾದ ದನಿಯನ್ನೊಳಗೊಂಡಿರುವ ಮಹೋಧಧಿಯ ಮಗ್ಗುಲ ಹಾದಿಯೊಳಗೆ ಮನೋಹರವಾದ ಮಂಗಗಮನದಿಂದ ಹಾಯಾಗಿ ವಿಹರಿಸಬಹುದು. ಮತ್ತು-ಆ ಹೊತ್ತಿನಲ್ಲಿ ದ್ವೀಪಾಂತರಗಳಿಂದ

ತರಿಸಿರುವ ಲವಂಗಕುಸುಮಗಳಮೇಲೆ ಹರಿದುಬರುವ ಮಂದಮಾರುತದಿಂದ ಮೈಬೆವರಿನ ಹನಿಗಳನ್ನು ಪರಿಹರಿಸಿಕೊಳ್ಳಬಹುದು ಎಂದು ಹೇಳಿ ವಿರಮಿಸಿದಳು. ಆದರೆ ಆಕಾರ ವಿಶೇಷದಿಂದ ಅಧೀನತೆಯನ್ನು ಪಡೆಯತಕ್ಕವಳಾಗಿರುವ ಆ ಭೋಜಾನುಜೆಯು ಈ ಪ್ರಕಾರ ಸುನಂದೆಯಿಂದ ಆಶೆಗೊಳಿಸಲ್ಪಟ್ಟಳಾದರೂ, ಯಾವನಾದರೊಬ್ಬ ಪುರುಷನು - ತನ್ನ ಪೌರುಷವೆಂಬ ನೀತಿಯಿಂದ ಲಕ್ಷ್ಮಿಯನ್ನು ತನಗೊಲಿಯುವಂತೆಸಗಿದರೂ, ದೈವಸಹಾಯವಿಲ್ಲದಿದ್ದರೆ ಆ ಲಕ್ಷ್ಮಿಯು ಬಲಿಯದೆ ತೊಲಗುವಹಾಗೆ, ಆಕೆಯೂ ಹೇಮಾಂಗದನೆಂಬ ನರದೇವನಿಗೆ ವಶಳಾಗದೆ ಆತನಿಂದ ಹಿಂತಿರುಗಿ ಮುಂದಡಿಯನ್ನಿಟ್ಟಳು.

ಚತುರಳಾಗಿರುವ ದೌವಾರಿಕೆಯಾದ ಸುನಂದನೆಯು-ಆ ಕೂಡಲೇ ಆಕೆಯ ಚಿತ್ತವೃತ್ತಿಯನ್ನರಿತು, ಪಾಂಡ್ಯದೇಶದೊಳಗೆ ಕನ್ಯಾಕುಬ್ಜದ ಬಳಿಯಲ್ಲಿರುವ ನಾಗಪುರಕ್ಕೆದೊರೆಯಾಗಿ, ಆಕಾರದಲ್ಲಿ, ದೇವತಾಪುರುಷನಂತೆ ಮೆರೆಯುತ್ತಲಿರುವ ವೀರಪುರುಷನ ಹತ್ತಿರದಲ್ಲಿ ನಿಂತು - ಭೋಜಾನುಜೆಯನ್ನು ನೋಡಿ, ಎಲೌ ಚಕೋರನಯನೆ! ನಿನ್ನಯ ನೋಟವನ್ನು ಇತ್ತ ಕಳುಹು. ಎಂದುಸಿರಿ, ಬಳಿಕ ಹೇಳತೊಡಗಿದಳು - ಎಳೆಬಿಸಿಲಿನ ಸುಳಿವಿನಿಂದೊಡಗೂಡಿ, ಹರಡಿ ಹರಿಯುತಲಿರುವ ಕಿರುಹೊಳೆಯಿಂದ ಮೆರೆಯುವ ಗಿರಿಯಂತೆ ಕುಳಿತಿರುವ ಈತನನ್ನು ಅವಲೋಕಿಸು, ಹೆಗಲಮೇಲೆ ತೋರಮುತ್ತಿನ ಹಾರಗಳನ್ನು ಇಳಿಯ ಹಾಕಿಕೊಂಡು, ಗಮಗಮಿಸುತಲಿರತಕ್ಕ ಹರಿಚಂದನದಿಂದ ಬೆಳಗುತಲಿರುವ ಈತನೇ ಪಾಂಡ್ಯ ಮಹಾರಾಜನು. ಈತನನ್ನು ಸಾಧಾರಣನೆಂದು ನೆನೆಯಬೇಡ; ಈತನು ದೀಕ್ಷೆಯನ್ನು ಕೈಗೊಂಡು, ಅಶ್ವಮೇಧ ಯಾಗವನ್ನಾಚರಿಸಿ, ಮಂಗಳಸ್ನಾನವನ್ನು ನೆರವೇರಿಸಿ, ಆರ್ದ್ರಶಿರನಾಗಿರುವಲ್ಲಿ ಹಿಂದೆ ರವಿಯ ಪಯಣವಂ ತಡೆಯಲು ಬೆಳೆಯ-ತೊಡಗಿದ ವಿಂಧ್ಯಾದ್ರಿಯ ಉಬ್ಬಟೆಯನ್ನಡಗಿಸಿ, ತುಸವೂ ಉಳಿಯದಂತೆ ಕಡಲನ್ನೆಲ್ಲ ಕುಡಿದು, ಮರಳಉಗುಳಿದ ಮಹಾಮುನಿಯೆನಿಸಿರುವ ಅಗಸ್ತ್ಯನೇ ಐತಂದು "ಏನೈ ಧುರಧೀರನೆ! ಸುಖಾವಭೃಥವ ನೆಸಗಿದೆಯಾ?" ಎಂದು ಪ್ರೀತಿಪೂರ್ವಕವಾಗಿ ಈತನನ್ನು ಕುರಿತು ಕುಶಲಪ್ರಶ್ನೆಯಂಗೈವನು. ಪೂರ್ವದಲ್ಲಿ-ಲಂಕಾರಮಣನಾದ ರಾವಣನು ಹೆರರು ಪಡೆಯಲು

ಅಸದಳವೆನಿಸಿದ ಬ್ರಹ್ಮಶಿರವೆಂಬ ಅಸ್ತ್ರವನ್ನು ಹರನ ಅನುಗ್ರಹದಿಂದ ಪಡೆದಿದ ಈತನಿಂದ ಖರನೇ ಮುಂತಾದ ರಕ್ಕಸರಿಗೆ ಮನೆಯಾದ ಜನಸ್ಥಾನಕ್ಕೆ ಏನು ತೊಂದರೆ ಬರುವುದೋ ಎಂದು ಅಳುಕಿ, ಇತನೊಡನೆ ಸಂಧಿಯನ್ನು ಮಾಡಿಕೊಂಡು, ಬಳಿಕ ಕೊಬ್ಬಿದವನಾಗಿ, ಇಂದ್ರನೇ ಮೊದಲಾದವರನ್ನು ಜಯಿಸಲೆಳಸಿ ಹೊರಟನು. ಹೇರಳವಾದ ವೀಳಯದೆಲೆಯ ಬಳ್ಳಿಗಳು ಹಬ್ಬಿರುವ ಅಡಿಕೆಯ ಮರಗಳಿಂದಲೂ, ಏಲಕ್ಕಿಯ ಲತೆಗಳಿಂದ ಆವರಿಸಲ್ಪಟ್ಟಿರುವ ಚಂದನತರುಗಳಿಂದಲೂ, ರಮಣೀಯವಾಗಿರುವ ಮಲಯ ಪರ್ವತದ ಬುಡದಲ್ಲಿನ ಬೈಲುಗಳೊಳಗೆ, ಹಸನಾದ ಹೊಂಗೆಯ ಚಿಗರುಗಳ ಹಾಸಿಗೆಯಮೇಲೆ ಹಾಯಾಗಿ ಕುಳಿತು, ಅಡಿಗಡಿಗೆ ಸುಖಿಸಬೇಕೆಂದು ನಿನಗೆ ಬಯಕೆಯಿದ್ದರೆ, ಹಸನ್ಮುಖಳಾಗಿ ಈತನ ಕೈ ಹಿಡಿಯಲು ಅನುಕೂಲಳಾಗು, ಹಾಗಾದರೆ - ಎಲೌ ಭಾಮಾಮಣಿ ! ಈತನೋ, ಕನ್ನೈದಿಲೆಯಂತೆಸೆವ ಮೈಬಣ್ಣದಿಂದ ಬೆಳಗುತಲಿದಾನೆ, ನೀನಾದರೆ ಗೋರೋಚನದಂತೆ ಗೌರವರ್ಣದಿಂದ ತಳತಳಿಸುತ್ತಲಿದ್ದೀಯೆ. ಈ ನಿಮ್ಮಿಬ್ಬರ ಕರಗ್ರಹಣಮಂಗಳವು-ಕಾರ್ಮುಗಿಲ ಮೋಡಮಿಂಚುಗಳ ಕೂಟದಂತೆ ಮೇಲೆಮೇಲೆ ಶುಭಕರವೆನಿಸುವುದಲ್ಲದೆ, ಪರಸ್ಪರ ಶೋಭಾಕರವಾಗಿಯೂ ಪರಿಣಮಿಸುವುದು ಎಂದು ಹೇಳಿ, ಆಕೆಯ ಭಾವೋದಯವನ್ನು ಇದಿರುನೋಡುತ್ತಲಿದ್ದಳು, ಅಂತಾ ಸುನಂದೆಯ ಬಹುತರವಾದ ಹಿತೋಪದೇಶಕ್ಕೆ ಭೋಜ ಸಹೋದರಿಯಾದ ಇಂದುಮತಿಯ ಚಿತ್ತವು ಎಡೆಗುಡಲಿಲ್ಲ. ದಿನಕರನನ್ನು ನೋಡದೆ ಕಣ್ಮುಗಿದಿರುವ ತಾವರೆಯಲ್ಲಿ ತಣ್ಗದಿರನ ಕಿರಣಗಳಿಗೆ ಎಡೆಯುಂಟೆ? ಇಂತು ಅನುರೂಪನಾದ ಪತಿಯನ್ನು ವರಿಸಲೆಳಸಿ ಐತರುತಲಿರುವ ಇಂದುಮತಿಯು ಇರುಳಿನಲ್ಲಿ ಸಂಚರಿಸುವ ದೀವಿಗೆಯಂತೆ ಆವಾವ ಭೂವಲ್ಲಭನನ್ನು ಅತಿಕ್ರಮಿಸಿ ಮುಂದರಿದು ಬಂದಳೋ, ಆಯಾ ಧರಾನಾಥರೆಲ್ಲರೂ ರಾಜವೀಧಿಯ ಇಕ್ಕೆಲದ ಉಪ್ಪರಿಗೆಗಳಂತೆ ಕ್ರಮವಾಗಿ ಕಾಂತಿಶೂನ್ಯರಾಗುತಬಂದರು.

ಅಲ್ಲಿಂದ ಮುಂದೆ ಇಂದುಮತಿಯು - ಮೆಲ್ಲಡಿಯನಿಡುತ ರಘುನಂದನನ ಸನಿಹಕೆ ಬರುತ್ತಿರಲು, ಅಜಕುಮಾರನು - ಈ ಕನ್ಯಾರತ್ನವು ತನ್ನನ್ನು ವರಿಸುವಳೋ, ಇಲ್ಲವೆ ಜರಿದು ಮುಂಜರಿವಳೋ ಎಂದು

ಮನದೊಳಗೆ ಕಳವಳಿಸತೊಡಗಿದನು. ಆ ವೇಳೆಗೆ ಸರಿಯಾಗಿ ಅಂಗದಾಲಂಕೃತವಾದ ಆತನ ಬಲದೋಳು ಅದಿರುತ್ತ, ಸಂಶಯಪಡಬೇಡವೆಂದು ಆತನ ಚಿತ್ತಚಾಂಚಲ್ಯವನ್ನು ಪರಿಹರಿಸುತಲಿದ್ದಿತು.

ಆ ಸುಕುಮಾರಿಯಾದ ಕುಮಾರಿಯು-ಸರ್ವಾವಯವಸುಂದರನಾದ ರಘುಕುಮಾರನ ಬಳಿಗೈತಂದಕೂಡಲೇ - ಬೇರೊಬ್ಬ ತರುಣನ ತಡಿಗೈದುವ ಆಶೆಯನ್ನು ತೂರೆದಳು. ದುಂಬಿಯಸಾಲು - ಚೆನ್ನಾಗಿ ಅರಳಿದ ಹೂಗಳಿಂದ ಸಿಂಗರವಾಗಿರುವ ಸಿಹಿ ಮಾವಿನ ಗಿಡವನ್ನು ಕಂಡಕೂಡಲೆ, ಬೇರೊಂದು ಮರಕ್ಕೆ ಸಾರಲೆಳಸುವುದುಂಟೆ? ಆಹಾ! ಸುನಂದೆಯು - ಭಾವಬೋಧೆಯಲ್ಲಿ ಬಲು ಜಾಣೆ, ರಾಜಕುವರಿಯು ಚಿತ್ತವೃತ್ತಿಯು ಅಜಕುಮಾರನಲ್ಲಿ ನೆಲೆಗೊಂಡಿತು ಎಂಬುದನ್ನು ತಟ್ಟನೆ ತಿಳಿದುಕೊಂಡಳು. ಇಂದು ಕಳೆಯಂತೆಸೆವ ಇಂದುಮತಿಯ ಮುಖಕಾಂತಿಯನ್ನು ಕಂಡಳು, ಹಿಂದಿನ ಕ್ರಮವನ್ನನುಸರಿಸಿ, ವಿಷಯವನ್ನು ವಿಸ್ತಾರವಾಗಿ ವಿವರಿಸತೊಡಗಿದಳು:—

ಎಲೌ ಕುಲಕನ್ಯೆಯೇ ಕೇಳು—ಮನುಪುತ್ರನಾದ ಇಕ್ಷ್ವಾಕು ಮಹಾರಾಜನ ವಂಶದೊಳುದಿಸಿದ ಕಕುತ್ಸ್ಥನೆಂಬ ಮಹೀಪಾಲನು ಸಕಲಗುಣಸಂಪನ್ನನೆನಿಸಿ, ವಸುಮತೀಶರೊಳಗೆಲ್ಲ ಉತ್ತಮನೆಂದು ಹೆಸರುವಾಸಿಯನ್ನು ಪಡೆದಿದ್ದನು. ಮಹಾಶಯರಾದ ಉತ್ತರ ಕೋಸಲೇಶ್ವರರೆಲ್ಲರೂ ಆ ಮಹಾಪುರುಷನಿಂದಲೇ ಕಾಕುತ್ಸ್ಥರೆಂಬ ಶ್ಲಾಘ್ಯವಾದ ಪ್ರಖ್ಯಾತಿಯನ್ನು ಪಡೆದಿದ್ದಾರೆ, ಆ ಕಕುತ್ಸ್ಥ ಮಹೀಪಾಲನು - ಒಂದುವೇಳೆ - ದೊಡ್ಡ ಗೂಳಿಯ ರೂಪವನ್ನು ತಾಳ್ದ ಮಹೇಂದ್ರನನ್ನು ಏರಿ, ಪಿನಾಕಪಾಣಿಯ ಬೆಡಗನ್ನಾಂತು, ಕಾಳೆಗದಲ್ಲಿ ಕಣೆಗಳ ಮಹಿಮೆಯಿಂದ ರಕ್ಕಸಿಯರ ಕಪೋಲಗಳನ್ನು ಕುಂಕುಮಾದಿ ಮಂಗಳದ್ರವ್ಯದ ಸಂಬಂಧವಿಲ್ಲದಂತೆ ಮಾಡಿದನು. ಮತ್ತು - ಸುರನಾಯಕನು ಸಿಂಹಾಸನದಲ್ಲಿ ಕುಳಿತಿರುವಾಗ - ಐರಾವತವನ್ನು ಏರಿ ಇಳಿಯುವ ಸಮಯದೊಳಗೆ ಅದರ ಕೊರಳನ್ನು ತಟ್ಟುವ ಸಡಗರದಿಂದ ಸಡಿಲವಾಗಿದ್ದ ತೋಳಿನ ಭುಜಕೀರ್ತಿಗೆ ತನ್ನ ಅಂಗವು ಒತ್ತಾಗಿ ತಾಗುವಹಾಗೆ, ಆತನ ಅರ್ಧಾಸನದಲ್ಲಿಯೂ ಕೂಡುತಲಿದ್ದನು. ಆ ಕಕುತ್ಸ್ಥ ಕುಲಪ್ರದೀಪನೆನಿಸಿದವನೇ ಅಲ್ಲದೆ ಮಹಾ ಯಶಸ್ವಿಯಾದ ದಿಲೀಪ ನೃಪನು

ಈ ದಿಲೀಪನೇ - ಶತಮುಖನಮೇಲಣ ಹೊಟ್ಟೆಕಿಚ್ಚನ್ನು ತೀರಿಸಿಕೊಳ್ಳಲಿಕ್ಕೆಂಬಂತೆ ತೊಂಭತ್ತೊಂಭತ್ತು ಯಾಗಗಳನ್ನು ಮಾಡಿ, ಆ ಇಂದ್ರನ ಪ್ರೀತಿಯನ್ನು ಕಳೆದುಕೊಳ್ಳಬಾರದೆಂದು ನೂರನೆಯ ಯಾಗವನ್ನು ನಿಲ್ಲಿಸಿದನು. ಆ ದಿಲೀಪ ಭೂಪನು - ಭೂಮಿಯನ್ನಾಳುತ್ತಿರುವಲ್ಲಿ - ಮದವತಿಯರಾದ ಮತ್ತಕಾಶಿನಿಯರು ಉದ್ಯಾನವೇ ಮೊದಲಾದ ಸ್ಥಲಗಳಿಗೆ ಪ್ರಯಾಣಮಾಡುತ, ಮಾರ್ಗದಲ್ಲುಳಿದು ನಿದ್ದೆಗೈವ ವೇಳೆಯೊಳಗೆ, ಅವರ ಉಡಿಗೆತೊಡಿಗೆಗಳನ್ನು ಅಲುಗಿಸಲಿಕ್ಕೆ ವಾಯುವೇ ಅಂಜುತಲಿದ್ದನು, ಹೀಗಿರಲು, ಇನ್ನುಳಿದವರು ಅಪಹರಿಸಲು ಕೈನೀಡುವುದಕ್ಕೆ ಸಾಮರ್ಥ್ಯವೆಲ್ಲಿಯದು? ಆ ದಿಲೀಪಾವನಿಪಾಲನ ಸತ್ಪುತ್ರನಾದ ರಘುವೇ ಈಗ ಸಾಮ್ರಾಜ್ಯವನ್ನಾಳುತಲಿದಾನೆ, ಆ ಮಹೋದಾರನೇ ಸರ್ವಸ್ವವನ್ನೂ ದಾನವನ್ನಾಗಿ ಕೈಗೊಂಬ ವಿಶ್ವಜಿತ್ತೆಂಬ ಯಾಗವನ್ನೆಸಗಿ, ನಾಲ್ದೆಸೆಗಳಲ್ಲಿಯೂ ಸೂರೆಗೊಂಡು ತಂದು ಬೆಳೆಯಿಸಿದ ಸಂಪತ್ಸಮೃದ್ಧಿಯನ್ನು, ಮೃದ್ಭಾಂಡಗಳು ಮಾತ್ರವೇ ಉಳಿಯುವಂತೆ ಮಾಡಿರುವನು. ಈ ಮಹಾನುಭಾವನ ಸತ್ಕೀರ್ತಿಯು - ಗಿರಿಯನ್ನೇರಿರುವುದು, ಕಡಲನ್ನು ಹೊಕ್ಕಿರುವುದು, ಪಾತಾಳಕ್ಕೆ ಇಳಿದಿರುವುದು, ಸ್ವರ್ಗಾದಿ ಲೋಕಗಳನ್ನು ಹತ್ತಿರುವುದು, ದಿಗಂತಗಳೊಳಗೆ ಹರಡಿರುವುದು. ಹೀಗೆ - ತಡೆಯಿಲ್ಲದೆ ಎಲ್ಲೆಲ್ಲಿಯೂ ವ್ಯಾಪಿಸಿರುವ ಯಶಸ್ಸನ್ನು, ದೇಶದಿಂದಲಾಗಲಿ, ಕಾಲದಿಂದಲಾಗಲೀ ಇಷ್ಟೆಂದು ಅಳೆಯಲಿಕ್ಕೆ ಅಳವಲ್ಲ. ನಾಕಲೋಕನಾಯಕನಾದ ಇಂದ್ರನನ್ನನುಸರಿಸಿ ಜಯಂತನುದಿಸಿರುವಹಾಗೆ, ಆ ರಘುಭೂದೇವೇಂದ್ರನನ್ನನುಸರಿಸಿಯೇ ಈ ಅಜಕುಮರನು ಜನಿಸಿ ಇದಾನೆ. ಹರಯದ ಹೊಮ್ಮಿಂದಿರುತ, ಪಳಗಬೇಕಾಗಿರುವ ಪಡ್ಡೆಗುರವು-ಗೂಳಿಗೆಣೆಯೆನಿಸಿ, ಹೊರೆಯನ್ನು ಹೊರಲು ತಾನೂ ಹೆಗಲುಕೊಡುವಂತೆ, ಬಹುಕಾಲದಿಂದ ಬಂದಿರುವ ರಘುಸಾಮ್ರಾಜ್ಯದ ಗುರುತರ ಭಾರವನ್ನು ಹೊರಲು, ಧುರಂಧರನಾದ ತಂದೆಗೆಣೆಯೆನಿಸಿ, ಜೊತೆಗೆ ಈತನೂ ಊಡಾಗಿರುವನು; ಅನುಕೂಲವಾದ ಕುಲ, ಎಣೆಯಾದ ಲಾವಣ್ಯ, ಹಿರಿಗೆಯಾಗಿ ಪೊಸತೆಸಿಸಿದ ವಯಸ್ಸು, ಸಮಾನವೆನಿಸಿದ ಸುಶೀಲ, ಮತ್ತು - ಜ್ಞಾನದಯಾಕ್ಷಮಾದಿ ಸುಗುಣಗಳು, ಇವಿಷ್ಟೂ ಇಂತು ಕಂಗೊಳಿಸುತಿರುವಲ್ಲಿ - ನೀನು - ನಿನಗೆ ಅನುರೂಪನಾದ ಈ ಭೂಪತಿ ಪುತ್ರನನ್ನು

ವರಿಸಿದರೆ, ರತ್ನವು ಕಾಂಚನದೊಡನೆ ಕಲೆಯುವುದು. ಎಂದುದಹರಿಸಿ, ಮುದುಮುಗಳ ವದನವನ್ನು ನಿರುಕಿಸುತ ನಿಂತಳು.

ಅಂತಾ ಸುನಂದೆಯು ಮಾತು ಮುಗಿಯುತ ಬರುವಾಗಲೇ ನರೇಂದ್ರನಂದನೆಯಾದ ಇಂದುಮತಿಯು - ಲಜ್ಜೆಯನ್ನು ತಗ್ಗಿಸಿ, ಅಜ ಕುಮಾರನ ಕೊರಳಿನಲ್ಲಿ-ಮನದ ಪದುಳದಿಂ ಪಸರಿಸುತ, ವರಣದ ಪಕುಳ ಮಾಲೆಯಂತಿರುವ ಪ್ರಸನ್ನದೃಷ್ಟಿಮಾಲೆಯಿಂದ ಆತನನ್ನು ಗ್ರಹಿಸಿದಳು. ಆ ಸುಕೇಶಿಯು ಮನದೊಳಗೆ ಧೀರತೆಗೆ ತಾವುತಪ್ಪಿತು, ಆ ತರುಣನ ಮೇಲಣ ಅಭಿಲಾಷೆಯು ಹೃದಯದೊಳಗೆ ಉಕ್ಕುತಲಿದ್ದಿತು, ಅದನ್ನು ಹೇಳಿ ಹೊರಪಡಿಸಿ ತೋರಲಾರದೆ ಹೋದಳು, ಆದರೂ ಶರೀರವನ್ನು ಭೇದಿಸಿ ಮೊಳೆಯುತಲಿರುವ ಪುಳಕದ ನೆಪದಿಂದ ಮನೋನುರಾಗವು ಹೊರಗೆ ಬರುತಲಿದ್ದಿತು, ಮೈಮರೆತವಳಂತೆ ಆನಂದಪರವಶತೆಯಿಂದ ಅಲುಗದೆ ನಿಂತಳು. ಆಗಲಾ ವೇತ್ರವತಿಯಾದ ಸುನಂದೆಯು - ಗೆಳತಿ ಯಾದ ಇಂದುಮತಿಯು ನಿಂತಿರುವ ಹೋರೆಯನ್ನು ನೋಡಿದಳು. ಇದು ಒಳ್ಳೆಯ ಸಮಯವೆಂದು ಭಾವಿಸಿ, ಎಲಾ ಆರ್ಯೆ! ಮುಂದೆ ಬೇರೊಂ ದೆಡೆಗೆ ತೆರಳಬಹುದಲ್ಲವೆ? ಎಂದು ಪರಿಹಾಸಪೂರ್ವಕವಾಗಿ ಹೇಳಿದಳು, ಆ ತಾವಿನಿಂದ ಅಡಿಯನ್ನಲುಗಿಸಲಾರದೆ ನಿಂತಿರುವ ಕುಮಾರಿಯು - ಹೊಟ್ಟೆಯಕಿಚ್ಚನ್ನು ಹುದುಗಿಸಿಕೊಂಡು, ಭಾವವನ್ನು ಸೂಚಿಸುತಲಿರು ವಡೊಂಕಾದ ನೋಟದಿಂದ ಸುನಂದೆಯನ್ನು ದುರದುರನೆ ನೋಡಿದಳು, ಬಳಿಕ-ಶರೀರವನ್ನಾಂತಿರುವ ತನ್ನ ಮನೋನುರಾಗವನ್ನು ಅರ್ಪಿಸುವ ಹಾಗೆ, ಮಂಗಳಕರವಾದ ಪರಿಮಳದ ಪುಡಿಯಿಂದ ಕೆಂಪಗಿರುವ ಹಾರವ ನ್ನು ಕುಮಾರನ ಕಂಠದಲ್ಲಿ ದಾದಿಯಾದ ಸುನಂದೆಯು ಕೈಗಳಿಂದ ಅಂದ ವಾಗಿರುವಹಾಗೆ ಇಳಿಯ ಹಾಕಿಸಿದಳು.

ತರುವಾಯ - ಗುಣವರೇಣ್ಯನಾದ ಆ ವರಕುಮಾರನು - ತನ್ನ ಕೊರಳಿನಲ್ಲಿ ಅರ್ಪಿಸಲ್ಪಟ್ಟುದಾಗಿ, ಅಗಲವಾದ ಎದೆಯಮೇಲೆ ಜೋಲಾ ಡುತಲಿರುವ ಆ ಮಂಗಳ ಕುಸುಮಮಾಲಿಕೆಯನ್ನು ವಿದರ್ಭರಾಜ ಸೋದರಿಯಿಂದ ಸಮರ್ಪಿಸಲ್ಪಟ್ಟ ಬಾಹುಪಾಶವನ್ನಾಗಿ ಸಂಭಾವಿಸಿದನು

ಆಗ - ಆಹಾ! ಕೌಮುದಿಯು ಮೋಡದಿಂದ ಹೊರಗೆಬಂದ ಕಳಾನಿಧಿಯಲ್ಲಿ ಕಲೆಯಿತು, ಜಾಹ್ನವಿಯು ತನಗನುರೂಪವಾಗಿರುವ

ಜಲನಿಧಿಯಲ್ಲಿ ಇಳಿಯಿತು ಎಂದೀಪ್ರಕಾರವಾಗಿ ಅಲ್ಲಿ ನೆರೆದಿರುವ ಪುರ ಜನರು - ಅನುಗುಣನಾದ ವರನಲ್ಲಿ ನಟ್ಟ ಇಂದುಮತಿಯ ಪ್ರೀತಿಯ ವಿಷಯದಲ್ಲಿ ಪರನರಪಾಲರ ಕಿವಿಗಳಿಗೆ ಕಠಿನವಾಗಿರುವಂತೆ ಪರಸ್ಪರ ತಂಡೋಪತಂಡವಾಗಿ ಮಾತನಾಡತೊಡಗಿದ್ದರು.

ಆ ವೇಳೆಯೊಳಗೆ-ಹರ್ಷಪರವಶರಾದ ಗಂಡಿನಕಡೆಯವರು ಒಂದು ಕಡೆಯಲ್ಲಿಯೂ, ಕನ್ಯೆಯು ಕರಗತವಾಗದೆ ಕೈಮೀರಿ ಹೋದುದರಿಂದ ಬೆಪ್ಪಾದ ಭೂಪಾಲರ ಗುಂಪು ಮತ್ತೊಂದು ಕಡೆಯಲ್ಲಿಯೂ ಇರುತ್ತಿದ್ದರೆ, ಆ ಕಲ್ಯಾಣ ಸಭಾಮಂಟಪವು - ಮುಂಜಾನೆಯಲ್ಲಿ - ಒಂದುಕಡೆ ಅರಳುತಲಿರುವ ತಾವರೆಯ ಸಾಲನ್ನೂ, ಮತ್ತೊಂದುಕಡೆ ಮುಗಿಯುತಲಿರುವ ಕುಮುದಗಳ ಗುಂಪನ್ನೂ ಒಳಗೊಂಡಿರುವ ಸರೋವರದಂತೆ ಕಂಗೊಳಿಸುತಲಿದ್ದಿತು.

ಇಂತು - ಸ್ವಯಂವರ ವರ್ಣನವೆಂಬ
ಆರನೆಯ ಅಧ್ಯಾಯಂ.



ಶ್ರೀಃ.

ರ ಘು ಕು ಲ ಚ ರಿ ತ ಂ.

## ಸಪ್ತಮಾಧ್ಯಾಯಂ.



ಸೂಚನೆ॥ ಭೋಜ ನೃಪಾನುಜೆ ಯಾ ರಘು!
ರಾಜಾತ್ಮಜ ಕರವ ಸೇರ ಲುಳಿದರ್ ಮುಳಿದರ್ ॥
ಆಜಿಯೊಳವದಿರ ಜೈಸುತೆ ।
ಸೋಜಿಗದಿಂ ಪುರವ ಸಾರ್ದ ನಜನತಿ ಮುದದಿಂ ॥

ಆ ಬಳಿಕ-ದೇವಪುತ್ರಿಯಾದ ದೇವಸೇನೆಯು - ತನಗನುಗುಣನಾದ ಕುಮಾರಸ್ವಾಮಿಯನ್ನು ಕೈಹಿಡಿದಂತೆ, ಅನುರೂಪನಾದ ವರನನ್ನು

ವರಿಸಿರುವ ತಂಗಿಯಾದ ಇಂದುಮತಿಯನ್ನು ಕರೆದುಕೊಂಡು, ವಿದರ್ಭ ನಾಥವಾದ ಭೋಜನು ಪುರಪ್ರವೇಶಕ್ಕೆ ಅಣಿಯಾದನು. ವಿವಾಹ ಮಂಗಳಶಾಲೆಯೊಳಗೆ ನೆರೆದಿದ್ದ ಅರಸುಮಕ್ಕಳೂ - ಭೋಜಕುಮಾರಿಯು ತಮ್ಮ ಕೈ ಸೇರದೆ ಹೋದುದರಿಂದ, ಅಯ್ಯೋ! ಕೋರಿಕೆಯು ನೆರವೇರದೆ ಹೋಯಿತಲ್ಲಾ ಎಂದು, ಹೇರಳವಾದ ಪೇಚಾಟದಿಂದ ಮುಂಜಾನೆಯ ಮುಗಿಲಿನಲ್ಲಿ ಚಂದಿರನೇ ಮೊದಲಾದ ಗ್ರಹಗಳಂತೆ ಕಳೆಗುಂದಿದ ಮೋರೆಯುಳ್ಳವರಾದರು, ಕನ್ಯಾರತ್ನದ ಮನಕೊಪ್ಪದಿದ್ದ ತಂತಮ್ಮ ಆಕಾರಗಳನ್ನೂ, ಅಲಂಕಾರಗಳನ್ನೂ ಹೊಟ್ಟೆಕಿಚ್ಚಿನಿಂದ ಬೈದುಕೊಳ್ಳುತ್ತಾ ಬಿಡಾರಗಳಿಗೆ ಹೊರಟರು. ಇಂದುಮತಿಯು ಅಜನನ್ನು ವರಿಸಿದುದು ಸೈರಿಸದಿದ್ದರೆ ಅರಸುಮಕ್ಕಳ ಕೂಟವು - ರಘುಕುವರನೊಡನೆ ಹೋರಾಡಲಿಕ್ಕೆ ಹೊರಡದೆ ಹಿಮ್ಮೆಟ್ಟಲು ಕಾರಣವೇನು? ಎನ್ನಬಹುದು. ಆದರೆ "ಶಚೀದೇವಿಯ ಸನ್ನಿಧಾನದ ಮಹಿಮೆಯಿಂದ ಸ್ವಯಂವರ ಮಂಟಪದಲ್ಲಿನ ಉತ್ಸವಕ್ಕೆ ಅಡ್ಡಿಯನ್ನು ಮಾಡುವವರಿಗೆ ವಿಡ್ಡೂರಗಳು ಬಂದೊದಗುವುವು:" ಎಂಬುದನ್ನು ದೊರೆಮಕ್ಕಳೆಲ್ಲ ಬಲ್ಲವರಾಗಿದ್ದರು. ಕ್ಷತ್ರಪುತ್ರರು - ಶಾಂತರಾಗಲಿಕ್ಕೆ ಇದೇ ಕಾರಣ. ಅದುವರೆಗೆ ಪರಿಜನರು - ಪುರದ ಹೊರವಳಯದಿಂದಲೂ ದಾರಿಯಲ್ಲಿ ಮಕರತೋರಣಗಳನ್ನು ಕಟ್ಟುವುದು, ಹೂಗಳನ್ನೆರಚುವುದು, ಧೂಪಗಳನ್ನು ಹಾಕುವುದು, ಪನ್ನೀರನ್ನು ಚೆಲ್ಲುವುದು, ಮೊದಲಾದ ಬಗೆಬಗೆಯ ಉಪಚಾರಗಳನ್ನು ಕಲ್ಪಿಸುವುವರಲ್ಲಿ ನಿರತರಾಗುತ್ತಿದ್ದರು. ಧ್ವಜಪಟಗಳನ್ನು ಸಾಲಾಗಿಯೂ, ಒತ್ತಾಗಿಯೂ ಹಿಡಿದರು. ಬಿಸಿಲಿನ ಬೇಗೆಗೆಡೆಯಿಲ್ಲದ ರಾಜಮಾರ್ಗದಲ್ಲಿ ಅಜಕುಮಾರವರನು - ವಧುವಿನಿಂದೊಡಗೂಡಿ, ಬಲು ಸಡಗರದಿಂದ ಪುರಪ್ರವೇಶವನ್ನು ಮಾಡಿದನು.

ಒಳಿಕ - ವಧೂವರರು ಮೆರವಣಿಗೆಯಿಂದ ಪುರಪ್ರವೇಶ ಮಾಡುವ ಸುದ್ದಿಯು - ಊರೊಳಗೆಲ್ಲ ಹರಡಿತು. ಕೇರಿಕೇರಿಗಳಲ್ಲಿ ಇಕ್ಕೆಲದ ಉಪ್ಪರಿಗೆಗಳಮೇಲೆ ಬಂಗಾರದ ಸಲಾಕೆಗಳನ್ನು ಸಟ್ಟಿರುವ ಕಿಟಕಿಗಳೊಳಗೂ, ಬಾಗಿಲುಗಳೊಳಗೂ, ಮುಖಗಳನ್ನಿಟ್ಟು, ಹೆಣ್ಣುಗಂಡುಗಳನ್ನು ನೋಡಬೇಕೆಂಬ ಸಂಭ್ರಮದಲ್ಲಿ - ಆ ಪುರಸುಂದರಿಯರ ಬೇರೆ ಕೆಲಸಗಳನ್ನು ತೊರೆದ ಬೆಡಗುಗಳು ಬಗೆಬಗೆಯಾಗಿದ್ದುವು —

ಒಬ್ಬ ಭಾಮಿನಿಯು - ಬೆಳಗಂಡಿಯಬಳಿಗೆ ಬಲು ಬೇಗನೆ ಓಡಿ ಬರುವ ಬೆಡಗಿನಲ್ಲಿ- ತಲೆಯ ತುರುಬಿನ ಗಂಟು ಸಡಿಲವಾಗಿ ಕಳಲಿತು, ಸುತ್ತಿದ್ದ ಹೂವಿನ ಸರವು ಜೋಲಾಡುತಲಿದ್ದಿತು, ಅದನ್ನು ಸರಿಮಾಡಿ ಕೊಳ್ಳಲು ಕೂದಲಿಗೆ ಕೈ ಹಾಕಿದ್ದವಳು ಹಾಗೆಯೇ ಮರೆತುಬಿಟ್ಟಳು, ಮತ್ತೊಬ್ಬ ಅಂಗನಾಮಣಿಯು ಹೆಜ್ಜೆಯನ್ನು ದಾದಿಯು ಅರಗಿನ ರಸ ದಿಂದ ಸಿಂಗರಿಸುತಲಿದ್ದಳು, ಆಗಲಾ ಸುಂದರಿಯು- ತನ್ನ ಮೆಲ್ನಡೆ ಯನ್ನು ತೊರೆದು, ಹೆಜ್ಜೆಯನ್ನು ಚಿಮ್ಮುತ, ದುಡುಕಿನಿಂದ ಮುಂದಡಿ ಗಳನ್ನಿಡುವಲ್ಲಿ - ಗವಾಕ್ಷದವರೆಗೂ ದಾರಿಯ ನೆಲದಮೇಲೆ ಅರಗಿನ ಬಣ್ಣದ ಗುರುತುಗಳು ಕಂಗೊಳಿಸುತಲಿದ್ದವು. ಒಬ್ಬ ಗರತಿಯು - ಸಣ್ಣ ಸಲಾಕೆಯಿಂದ ಬಲಗಣ್ಣಿಗೆ ಕಾಟಿಕೆಯನ್ನು ಹಚ್ಚಿಕೊಂಡು, ಎಡಗಣ್ಣನ್ನು ಸಿಂಗರಿಸುವ ಹೊತ್ತಿಗೆ, ನೋಟದ ಸಂಭ್ರಮವು ಒದಗಲು, ಕಜ್ಜಲವನ್ನೊತ್ತಿದ್ದ ಕಡ್ಡಿಯನ್ನು ಹಿಡಿದಿದ್ದವಳು ಹಾಗೆಯೇ ವಾತಾಯನ ದ ಬಳಿಗೆ ದುಡುದುಡನೆ ಓಡಿದಳು. ಜಾಲರಂಧ್ರದ ಹತ್ತಿರಕ್ಕೆ ಬಂದು ನಿಂದು ನೋಡುವ ಬಯ್ಯಾರದಲ್ಲಿ, ಸಡಲಿದ ನಿರಿಮುಡಿಯನ್ನು, ಟೊಂಕದಲ್ಲಿ ಬೆಳಕನ್ನು ಬೀರುವ ಕಯ್ಯಲ್ಲಿ ಹಿಡಿದಿದ್ದ ಸೀಮಂತಿನಿಯೋ ರ್ವಳು ಹಾಗೆಯೇ ನಿಂತು ನೋಡತೊಡಗಿದಳು. ಇನ್ನೊಬ್ಬ ಲಲನೆಯು - ಉಡಿಗೆ ಸುತ್ತಿಕೊಂಬ ಬಂಗಾರದೆಳೆಗೆ ಮಣಿಗಳನ್ನು ಪೋಣಿಸುತ್ತಿದ್ದಳು, ತ್ವರೆಯಿಂದೆದ್ದು ನಡೆವ ಬೆಡಗಿನಲ್ಲಿ ದಾರವು ಹರಿದು, ರತುನಗಳು ಸರಿದು ಉದಿರುತ್ತಿದ್ದುವು, ತಂತುವಿನ ತುದಿಯು ಹಜ್ಜೆಯ ಹೆಬ್ಬೆರಳಿಗೆ ತೊಡ ರುತಲಿದ್ದಿತು, ಆದರೂ ಅದು ಆಕೆಯ ನೆನಪಿಗೆ ಬರಲೇ ಇಲ್ಲ. ಹೀಗೆ- ಬಹುಮಂದಿ ಮಾನಿನಿಯರು - ಮದುಮಕ್ಕಳ ಮೆರವಣಿಗೆಯನ್ನು ನೋಡಬೇಕೆಂಬ ಬಯಕೆಯ ಬಿರುವಿನಿಂದ ಬುಡಬುಡನೆ ಬಲುಬೇಗನೆ ಒಂದು, ಸುವಾಸನೆಯ ಉಸಿರನ್ನೂ, ತಳತಳಿಸುವ ದೃಷ್ಟಿಗಳನ್ನೂ ಒಳ ಗೊಂಡಿರುವ ಮುಖಗಳನ್ನು ಕಿಟಕಿಗಳಲ್ಲಿ ದಟ್ಟವಾಗಿ ಕಿಕ್ಕಿರಿವಂತೆ ಇಟ್ಟರು. ಆಗಲಾ ಗವಾಕ್ಷಗಳು - ಚಲಿಸುತಲಿರುವ ದುಂಬಿಗಳೊಡ ಗೂಡಿ ಅಂದವಾಗಿ ಅರಳಿ, ಗಮಗಮಿಸುವ ಕೆಂದಾವರೆಗಳಿಂದ ಸಿಂಗರ ಗೊಂಡಂತೆ ಕಂಗೊಳಿಸುತಲಿದ್ದುವು. ಅಂತು ನಿಂತ ನಾರಿಯರು - ಸುರ ಸುರಸ ಸವಿಯನ್ನು ಚಪ್ಪರಿಸುತ, ಅಲುಗದಿರುವ ತಮ್ಮನಯನಗಳಿಂದ

ರಘುಕುಮಾರನನ್ನು ತಣಿವಾರ ಕುಡಿಯುತಲಿದ್ದರು. ಆಗಲವರ ಇತರೇಂದ್ರಿಯಗಳೆಲ್ಲವೂ ಬೇರೆ ವಿಷಯಗಳನ್ನು ತೊರೆದು, ದೃಷ್ಟಿಗೆ ಳನ್ನೇ ಸರ್ವಪ್ರಕಾರದಿಂದಲೂ ಹೊಕ್ಕಿರುವಂತಿದ್ದುವು. “ಆಹಾ! ದೂರದಲ್ಲಿ ಮರೆಯೊಳಿದ್ದ ನರಪತಿಗಳು - ಈ ಇಂದುಮತಿಯನ್ನು ನನಗೆ ಕೊಡಬೇಕು, ತನಗೆ ಕೊಡಬೇಕು ಎಂದು ಭೋಜನನ್ನು ಕುರಿತು ಬೇಡುತ್ತಲಿದ್ದರೂ, ಈ ಸುಕುಮಾರಿಯು ಸ್ವಯಂವರವನ್ನೇ ಬಯಸಿ ದುದು ಸಾರ್ಥಕವಾಯಿತು, ಹಾಗಿಲ್ಲದಿದ್ದರೆ ವರಮಹಾಲಕ್ಷ್ಮಿಯು ನಾರಾಯಣನನ್ನು ವರಿಸಿದಂತೆ ಈ ಅರಗುವರನನ್ನು ವರಿಸುತ್ತಿದ್ದಳೆ? ಸರ್ವಾತ್ಮನಾ ಇಲ್ಲ” ಎಂದು ಆ ನಾರೀಮಣಿಯರೆಲ್ಲ ಮಾತನಾಡಿಕೊ ಳ್ಳುತ್ತಿದ್ದರು. —“ಅಹಹ!! ಎಲ್ಲರ ಹೊಗಳಿಕೆಗೂ ಈಡಾಗಿ, ಎಲ್ಲರೂ ಬಯಸತಕ್ಕದೆನಿಸಿರುವ ಚಲುವಿಕೆಯನ್ನು ಪಡೆದಿರತಕ್ಕ ಈ ವಧೂವರರಿಗೇ, ದಾಂಪತ್ಯವನ್ನು ವಿಧಿಯು ಅನುಗೊಳಿಸದೆ ಇದ್ದದೇ ಆದರೆ, ಆಗ - ಹೆಣ್ಣುಗಂಡುಗಳಲ್ಲಿ ಇಂತಪ್ಪ ಅಪಾರವಾದ ಸೌಂದರ್ಯ ವನ್ನು ನಿರ್ಮಿಸಿದ ಆ ಪ್ರಜಾನಾಥನ ಪ್ರಯಾಸವು ಪ್ರಯೋಜನವಿಲ್ಲದೆಯೆ ಹೋಗುತಲಿದ್ದಿತು ಎಂದೂ ಆಡಿಕೊಳ್ಳುತಲಿದ್ದರು, ಮತ್ತು-“ಎಂದೂ ಬಿಡನಾಡಿಗಳಾಗಿದ್ದ ಆ ರತಿಮನ್ಮಥರೇ ಈ ಹೆಣ್ಣುಗಂಡುಗಳ ರೂಪದಿಂದ ಹುಟ್ಟಿರಬೇಕು. ಹಾಗೆ ಇಲ್ಲದಿದ್ದರೆ, ಸಾವಿರಾರುಮಂದಿ ನರಪತಿ ಕುಮಾ ರರಿದ್ದರೂ, ಅವರನ್ನೆಲ್ಲ ತೊರೆದು, ಭೋಜಕುಮಾರಿಯು - ತನಗನುರೂ ಪನಾದ ರಘುಕುಮಾರನನ್ನು ವರಿಸಲು ಕಾರಣವೇನು? ಈಗ ಅರಿಯ ಲಾಗದಿದ್ದರೂ ಜನ್ಮಾಂತರಾನುಭವದ ವಾಸನಾವಶದಿಂದ ಪೂರ್ವಸಂಬಂ ಧದ ವಸ್ತುವಿನಲ್ಲಿ ಮನವು ಸ್ನೇಹದಿಂದ ತಾನಾಗಿ ಪ್ರವರ್ತಿಸುವುದು ದಿಟ” ಎಂತಲೂ ಎಂದುಕೊಂಡರು.

ಹೀಗೆಲ್ಲ - ಆ ಪುರಸುಂದರಿಯರ ಮುಖಗಳಿಂದ ಹೊರಡುತಲಿರುವ ಕಿವಿಗಿಂಪಾದ ಮಾತುಗಳನ್ನು ಆಲಿಸುತ್ತಾ, ಅಜಕುಮಾರನು - ಮಂಗಳ ಕರವಾದ ರಚನೆಗಳಿಂದ ಅಂದವಾಗಿ ಬೆಳಗುತಲಿರುವ ಮಾವನ ಮನೆ ಯನ್ನು ಹೊಕ್ಕನು. ಕಾಮರೂಪದೇಶದರಸಿನ ಕೈಯನ್ನಾಧಾರಮಾಡಿ ಕೊಂಡು ಕರೇಣುವಿನಿಂದ ಕೆಳಗೆ ಇಳಿದನು, ಬಳಿಕ ವೈದರ್ಭನು ತೋರಿದ ಬಳತೊಟ್ಟಿಯನ್ನು, ಸಂಬಂಧಿಯ ಸದನದೊಳಗಣ ಸುದತಿಯರ

ಸ್ವಾಂತವನ್ನು ಪ್ರವೇಶಿಸುವಹಾಗೆ ಪ್ರವೇಶಿಸಿದನು, ಅಮೂಲ್ಯವಾದ ಸಿಂಹಾಸನದಮೇಲೆ ಕುಳಿತನು, ಭೋಜನು ಮಮತೆಯಿಂದೊಪ್ಪಿಸಿದರತ್ನ ಗಳಿಂದಲೂ, ಮಧುಪರ್ಕದಿಂದಲೂ ಮಿಳಿತವಾದ ಸತ್ಕಾರಸಾಮಗ್ರಿಗಳನ್ನೂ ದುಕೂಲಗಳೆರಡನ್ನೂ, ಕಾಂತಾಜನರ ಕಟಾಕ್ಷಗಳೊಂದಿಗೆ ಪರಿಗ್ರಹಿಸಿದ ನು. ಆಮೇಲೆ-ಚಂದಿರನ ಕಿರಣಗಳು ಮಿರುಗುತಲಿರುವ ನೊರೆಗಳ ಸಾಲಿ ನಿಂದ ಬೆಳಗುವ ಕಡಲನ್ನು ದಡಕ್ಕೆ ತಂದುಬಿಡುವಹಾಗೆ, ವಿನಯಸಂಪನ್ನ ರಾದ ಅಂತಃಪುರಾಧಿಕಾರಿಗಳು- ದುಕೂಲಧರನಾದ ಅಜಕುಮಾರನನ್ನು ವಧುವಿನ ಸಮೀಪವನ್ನುಕುರಿತು ಕರೆತಂದರು. ಹಸೆಯು ಜಗುಲಿಯಮೇಲೆ ಅಗ್ನಿಯಂತೆ ಬೆಳಗುತಲಿರುವ ಭೋಜ ಪುರೋಹಿತನು-ಅಗ್ನಿಯನ್ನು ಪ್ರತಿ ಷ್ಠಿಸಿ, ವಿಧಿಪ್ರಕಾರ ಆಜ್ಯಾದಿಗಳ ಹವನದಿಂದ ಅರ್ಚಿಸಿ, ಆ ವಹ್ನಿ ಯನ್ನೇ ಸಾಕ್ಷಿಸ್ಥಾನವಲ್ಲಿಟ್ಟು, ವಧೂವರರ ವಿವಾಹ ವಿಧಿಯನ್ನು ಸಾಂಗ ವಾಗಿ ನೆರವೇರಿಸತೊಡಗಿದನು. ಆ ವೇಳೆಯೊಳಗೆ-ಹತ್ತಿರವಲ್ಲಿ ಹಬ್ಬಿದ ಅಶೋಕಲತೆಯು ತಳಿರಿನಿಂದೊಡಗೂಡಿರುವ ಚಿಗುರನ್ನೊಳಗೊಂಡ ಸಹ ಮಾವಿನಗಿಡದಂತೆ, ಅಜಕುಮಾರನು ತನ್ನ ಕರತಲದಿಂದ ವಧುವಿನ ಕರರುಹವನ್ನು ಪಿಡಿದು ವಿಶೇಷವಾಗಿ ವಿರಾಜಿಸುತಲಿದ್ದನು. ಅಲ್ಲದೆ ರಘುರಾಜಪುತ್ರನು - ಮಣಿಕಟ್ಟಿನಲ್ಲಿ ಪುಳಕಿತನಾದನು, ಕುಮಾರಿಯು ಕೈಬೆರಳುಗಳಲ್ಲಿ ಬೆವರನ್ನುಳ್ಳವಳಾದಳು, ಆ ಸಂದರ್ಭದಲ್ಲಿ ಮನೋಭ ವನು - ಅವರೀರ್ವರಲ್ಲಿಯೂ ರಾಗರಸವನ್ನು ಹಂಚುವಂತಿದ್ದಿತು. ಮತ್ತು- ಒಬ್ಬರ ಭಾವವನ್ನೊಬ್ಬರು ನೋಡಬೇಕೆಂಬ ಕುತೂಹಲ ದಿಂದ ಇಬ್ಬರ ಕುಡಿನೋಟಗಳೂ ಹೊರಟುವು. ನಡುವೆ ಕಲೆತುವು, ಒಡನೆ ನಾಚಿಕೆಯು ಸೆಳೆತದಿಂದ ಹಿಂದಿರುಗಿದುವು, ಅದು ಬಲು ಅಂದ ವಾಗಿದ್ದಿತು, ಜ್ವಲಿಸುತಲಿರುವ ಅಗ್ನಿಯನ್ನು ಪ್ರದಕ್ಷಿಣೆಮಾಡುವ ಕ್ರಮ ದಲ್ಲಿ - ಆ ಗಂಡುಹೆಣ್ಣುಗಳು? ಮೇರುವನ್ನು ಪ್ರದಕ್ಷಿಣೆಮಾಡುತ ಪರಸ್ಪ ರವಾಗಿ ಸಂಬಂಧಿಸಿರುವ ಹಗಲಿರುಳುಗಳಂತೆ ಶೋಭಿಸುತಲಿದ್ದರು. ಬ್ರಹ್ಮತೇಜಸ್ಸಿನಿಂದ ಬೆಳಗುತಲಿರುವ ಪುರೋಹಿತನಿಂದ ನೇಮಿಸಲ್ಪಟ್ಟ ಆ ಬಡನಡುವಿನ ಹೆಣ್ಣು - ಮದವೇರಿದ ಚಕೋರದಂತೆ ಚಂಚಲಾಕ್ಷಿ ಯಾಗುತ್ತಾ, ಅಗ್ನಿಯಲ್ಲಿ ಸೇಮದ ಅರಳನ್ನು ಸುರಿದಳು. ತುಪ್ಪ, ಬನ್ನಿಯಚಿಗುರು, ಅರಳು ಇವುಗಳನ್ನು ವಿಧಿಯಪ್ರಕಾರ ವಹ್ನಿಯಲ್ಲಿ

ಹವನವಾಡಲು, ಕೂಡಲೆ ಬೆಂಕಿಯಿಂದ ಹೊರಟ ಉರಿಯನ್ನೊಳಗೊಂಡಿರುವ ಪಾವನವಾದ ಸುವಾಸನೆಯ ಹೊಗೆಯು-ಇಂದುಮತಿಯ ಕಪೋಲದವರೆಗೂ ಬಂದು, ಕ್ಷಣಕಾಲಮಾತ್ರ ಆಕೆಯ ಕಿವಿಗಲಂಕಾರವಾಗಿರುವ ಕನ್ನೈದಿಲೆಯಂತೆ ಕಂಗೊಳಿಸುತಲಿದ್ದಿತು. ಆ ವಧೂವದನವು-ಅಗ್ನಿಯಿಂದ ಹೊರಡುವ ಆಚಾರಧೂಮವನ್ನು ಪರಿಗ್ರಹಿಸಿ, ಕಾಟಿಕೆಯ ದ್ರವದಿಂದ ಚಂಚಲವಾದ ದೃಷ್ಟಿಯುಳ್ಳುದೂ, ಬಾಡಿದ ಯವೆಯ ಮೊಳಕೆಯ ಕರ್ಣಾಭರಣವುಳ್ಳುದೂ, ಕೆಂಬಣ್ಣದ ಕಪೋಲದ ರೇಖೆಗಳುಳ್ಳುದೂ ಆಗಿದ್ದಿತು. ಆಮೇಲೆ - ಆ ಕನ್ಯಾಕುಮಾರರೀರ್ವರೂ ಚಿನ್ನದ ಮಣೆಯಮೇಲೆ ಕುಳಿತು, ವ್ರತಪರರಿಂದಲೂ, ನಂಟರಿಂದೊಡಗೂಡಿದ ಅರಸನಿಂದಲೂ, ಮಕ್ಕಳೊಂದಿಗರಾದ ಮುತ್ತೈದೆಯರಿಂದಲೂ ಆಚಾರಸಿದ್ಧವಾದ ಸೇಸೆಯ ಕ್ರಮವನ್ನು ಅನುಭವಿಸಿದರು.

ತರುವಾಯ ಭೋಜಕುಲಚಂದ್ರನೆನಿಸಿ, ಸೌಭಾಗ್ಯಶಾಲಿಯಾಗಿರುವ ಅರಸು - ಇಂತು ಆ ಕನ್ಯಾವರರಿಗೆ ಪಾಣಿಗ್ರಹಣ ಮಂಗಳ ಮಹೋತ್ಸವವನ್ನು ನೆರವೇರಿಸಿ, ಕಲ್ಯಾಣಮಂಟಪದಲ್ಲಿ ನೆರೆದಿರುವ ದೊರೆಮಕ್ಕಳು ಮುಂತಾದವರಿಗೆ, ಬೇರುಬೇರಾಗಿ ಆದರದಿಂದ ಉಚಿತವನ್ನರಿತು ಗಂಧಪುಷ್ಪಾದಿ ಸತ್ಕಾರವನ್ನು ಸಮರ್ಪಿಸುವಂತೆ ಅಧಿಕಾರಿಗಳಿಗಾಜ್ಞಾಪಿಸಿದನು. ಆ ಮಹಾಸಭೆಯೊಳಿದ್ದ ಮಹೀಪಾಲರು - ಮೊಸಳೆ ಮುಂತಾದ ಕ್ರೂರಜಂತುವನ್ನೊಳಗೆ ಅಡಗಿಸಿಕೊಂಡು, ಮೇಲೆ ತಿಳಿಯಾದ ನೀರಿನಿಂದ ಬೆಳಗುವ ಮಡುವಿನಂತೆ; ಎದೆಯೊಳಗೆ ಅವಿತಿರುವ ಹಗೆತನವನ್ನು ಹೊರಪಡಿಸದೆ, ಕಪಟದ ನಗೆ ಮೊದಲಾದ ಸಂತಸದ ಕುರುಹನ್ನು ತೋರುತ್ತಾ, ಭೋಜನೊಪ್ಪಿಸಿದ ಉಡುಗೊರೆಯೇ ಮುಂತಾದ ಉಪಚಾರಗಳನ್ನು, ಕಾಣಿಕೆಯೇ ಮೊದಲಾಗಿರುವ ಮುಯ್ಯಿ ನೆಪದಿಂದ ಆತನಿಗೇ ಸಲ್ಲಿಸಿ, ಅರಸನನ್ನು ಬೆಸಗೊಂಡು, ತಂತಮ್ಮ ಪುರಗಳನ್ನು ಕುರಿತು ಪಯಣಮಂ ಬೆಳಸಿದರು.

ಆದರೆ - ಭೋಜರಾಜಧಾನಿಗೆ ಬಂದಿದ್ದ ಅರಸುಮಕ್ಕಳಿಗೊಬ್ಬರಿಗೂ ಆ ಅರಗುವರಿಯು ದೊರೆಯಲಿಲ್ಲವಷ್ಟೆ? ಅವರೆಲ್ಲರೂ ಗುಟ್ಟಾಗಿ ಬಿಟ್ಟುಗೂಡಿ "ನಾವಿಲ್ಲಿ ಅಜನಮೇಲಣ ಹಗೆತನವನ್ನು ತೀರಿಸಿಕೊಳ್ಳಲು ಸಾಧ್ಯವಿಲ್ಲ, ನಮ್ಮ ಕೋರಿಕೆಯೇನೋ ಕೈಗೂಡಲಿಲ್ಲ,

ವರನು ಈ ಪುರದಿಂದ ನಾಳೆ ಹೊರಡುವನು, ನಾವೆಲ್ಲ ಇಂದೇ ಪ್ರಯಾಣಮಾಡಿ ದಾರಿಯಲ್ಲಿ ಕಾದಿದ್ದರೆ, ಕಷ್ಟವಿಲ್ಲದೆ ಕನ್ಯೆಯು ಕರಗತಳಾಗುವಳು'' ಎಂದು ಮೊದಲೇ ಸಂಕೇತಮಾಡಿಕೊಂಡಿದ್ದ ಮೇರೆಗೆ ಮುಂಚಿತವಾಗಿಯೇ ಬಂದು, ಆಮಿಷಾಪಹಾರಕ್ಕಾಗಿ ಮಾರ್ಗವನ್ನು ಆವರಿಸಿ ಅಲ್ಲಲ್ಲಿ ಇದಿರುನೋಡುತಲಿದ್ದರು.

ಇತ್ತ - ಭೋಜಭೂಪಾಲನು ಅನುಜೆಯ ವಿವಾಹಸಂಭ್ರಮವೆಲ್ಲ ಬೆಳೆದಬಳಿಕ, ಮನದ ಉತ್ಸಾಹಾನುಸಾರ ತನ್ನ ಸಂಪದವನ್ನು ಹೆಣ್ಣಿಗೆ ಬಿಲುವಳಿಯಾಗಿ ಕೊಟ್ಟು, ವಧೂವರರನ್ನು ಪ್ರಯಾಣಮಾಡಿಸಿದನಲ್ಲದೆ, ತಾನೂ ಹಿಂಬಾಲಿಸಿದನು. ಮೂಲೋಕದಲ್ಲಿಯೂ ಮೇಲಾದ ಹೆಸರುವಾಸಿಯನ್ನು ಪಡೆದಿರುವ ರಾಘವನೊಡನೆ ಮೂರು ಟಂಕಿಗಳು ಇದ್ದು, ಬಳಿಕ ಶುಕ್ಲಪಕ್ಷದ ಪಾಡ್ಯಮಿಯಲ್ಲಿ ತಣ್ಗದಿರನು ಬೆಂಗದಿರನಿಂದ ತಿರುಗುವಹಾಗೆ, ರಘುಕುಮಾರನಿಂದ ಕುಂಡಿನ ಪುರಾಭಿಮುಖನಾದನು.

ಹಿಂದೆ - ರಘುವು ದಿಗ್ವಿಜಯಮಂ ಮಾಡಿದಾಗ, ನಾಡೊಡೆಯರ ಬೊಕ್ಕಸಗಳನ್ನೇ ಬಳಿದು ತಂದಿದ್ದನೆಂದು ಆತನ ವಿಷಯದಲ್ಲಿ ದೊರೆಗಳೆದೆಯಲ್ಲಿ ವೈರವು ಕುದಿಯುತಲಿದ್ದಿತು. ಅವನ ಮಗನಾದ ಅಜನೀಗ, ಭೋಜಕನ್ಯಾರತ್ನವನ್ನು ಅಪಹರಿಸಿದುದು ಆ ಅವನಿಪಾಲರಿಗೆ ಸೈರಿಸಲೇ ಇಲ್ಲ. ಆ ದ್ವೇಷವನ್ನೆಲ್ಲ ಕಾರಲಿಕ್ಕೆ ಇದು ಸರಿಯಾದ ಸಮಯವೆಂದು ಬಗೆದರು. ಪೂರ್ವದಲ್ಲಿ - ವಿರೋಚನನ ಮಗನಾದ ಬಲಿಯು ಕೊಟ್ಟ ಸಿರಿಯನ್ನು ಪಡೆದು, ಅಳೆಯಲು ಬೆಳೆಯತೊಡಗಿದ ತ್ರಿವಿಕ್ರಮನ ಅಡಿಯನ್ನು, ಇಂದ್ರನಿಗೆ ಹಗೆಯಾದ ಪ್ರಹ್ಲಾದನು ಹೇಗೋಹಾಗೆ, ಕೊಬ್ಬಿರುವ ಅರಸುಮಕ್ಕಳ ಹಿಂಡು, ಭೋಜಕನ್ಯೆಯನ್ನು ಕರದೊಯ್ಯುತಲಿರುವ ಅಜಕುಮಾರನನ್ನು ಅಡ್ಡಗಟ್ಟಿತು. ಅಜರಾಜ ಕುಮಾರನೇನು ಸಾಧಾರಣನೆ? ಆ ಕೂಡಲೆ ತನ್ನ ತಂದೆಗೆ ಆಪ್ತನಾದ ಮಂತ್ರಿಯನ್ನು ಬಹುಮಂದಿ ವೀರಭಟರೊಡನೆ ಕನ್ಯೆಯ ಕಾವಲಿಗೆ ನೇಮಿಸಿ, ಉಕ್ಕಳಿಸುವ ಅಲೆಗಳನ್ನೊಳಗೊಂಡ ಶೋಣನದವು ಭಾಗೀರಥಿಯನ್ನು ಹೇಗೋಹಾಗೆ, ಆ ವಸುಮತೀಶರ ವಾಹಿನಿಯನ್ನು ಇದಿರಿಸಿದನು. ಕಾಲಾಳನ್ನು ಕಾಲಾಳೂ, ರಥಿಕನನ್ನು ರಥಿಕನೂ, ಕುದುರೆಯನೇರಿದವನನ್ನು

ಕುದುರೆಯನೇರಿದವನೂ, ಆನೆಯ ಮಾವಟಿಗನನ್ನು ಆನೆಯ ಮಾವಟಿ
ಗನೂ ಕ್ರಮವಾಗಿ ಇದಿರಿಸಿ, ಸಮಬಲದ ಭಟರ ಬವರವು ಬೆಳೆಯಿತು.
ರಣವಾದ್ಯಗಳು ಮೊಳಗತೊಡಗಿದುವು, ಬಿಲ್ಲಾಳುಗಳೊಳಗೆ ಒಬ್ಬರ
ನುಡಿಯು ಬೇರೊಬ್ಬರಿಗೆ ಕೇಳಬರುತಲಿರಲಿಲ್ಲ, ತಂತಮ್ಮ ಮನೆತನದ
ಹೆಸರುವಾಸಿಯನ್ನು ಯಾರೂ ಹೇಳಿಕೊಳ್ಳಲೇ ಇಲ್ಲ, ಒಬ್ಬರಮೇಲೊ
ಬ್ಬರ ಅಂಬುಗಳು ಬಂದು ಬಿದ್ದ ಕೂಡಲೆ, ಆ ಬಾಣಗಳ ಮೇಲಿರುವ
ನಾಮಾಕ್ಷರಗಳಿಂದ ಇದಿರಾಳಿನ ಪ್ರಖ್ಯಾತಿಯನ್ನರಿತು, ಬಿಲ್ಲಾಳುಗಳ
ಲ್ಲೊಬ್ಬರನ್ನೊಬ್ಬರು ಪೌರುಷದ ಪರಿಯಂಕುರಿತು ಕೊಂಡಾಡಿಕೊಳ್ಳು
ತಲಿದ್ದರು. ಕಾಳೆಗದಲ್ಲಿ ಕುದುರೆಗಳ ತುಳಿತದಿಂದೆದ್ದ ಧೂಳಿಯು
ತೇರುಗಳ ಚಕ್ರದ ಪಟ್ಟೆಗಳಿಂದ ಹಾರಿದ ರಜದಿಂದ ದಟ್ಟವಾಗಿ, ಆನೆಗಳ
ಅಗಲವಾದ ಕಿವಿಗಳಿಂದ ಬೀಸಲ್ಪಟ್ಟು, ಹರಡಿ, ಬಟ್ಟೆಯಂತಾಗಿ, ರವಿ
ಮಂಡಲಕ್ಕೆ ಹೊದಿಕೆಯಾಯಿತು. ದಳಗಲ್ಲಿ ಎತ್ತಿ ಹಿಡಿದಿರುವ ದಾಳಗಳ
ತುದಿಯಲ್ಲಿನ ಬಟ್ಟೆಗಳೊಳಗೆ ಚಿತ್ರಿಸಿರುವ ಮೀನುಗಳು ಗಾಳಿಯ
ಬಿರುವಿನಿಂದ ಬಾಯ್ಗಳನ್ನು ತೆರೆದು, ಮೇಲಕ್ಕೆ ಹಾರಿಬಂದ ಪಡೆಯ
ಧೂಳಿಯನ್ನು ಕುಡಿದು, ಮುಂಗಾರು ಮಳೆಯ ಹೊಸದಾದ ಬಂಡು
ನೀರನ್ನೀಂಟಿ, ಮಲಿನವಾಗಿರುವ ನಿಜವಾದ ಮೀನುಗಳಂತೆ ಬೆಳಗುತಲಿ
ದ್ದುವು. ಆಗಸದ ಅಂಗಳವೆಲ್ಲ ಧೂಳಿಯಿಂದ ತುಂಬಿರಲು, ಬಂಡಿಯ
ಗಾಲಿಯ ದನಿಯಿಂದ ಇದು ತೇರೆಂದು ತಿಳಿಯಬರುತಲಿದ್ದಿತು. ಕೊರಳ
ಗಂಟೆಯ ಗಣಗಣವೆಂಬ ಸದ್ದಿನಿಂದ ಗಜವೆಂದು ಗೊತ್ತಾಗುತಲಿದ್ದಿತು.
ತಂತಮ್ಮ ದೊರೆಯ ಹೆಸರನ್ನು ಹೇಳುವುದರಿಂದಲೇ ಧೂಳಿಯಲ್ಲಿ ಮುಳು
ಗಿರುವ ಆಳು ಇಂಥವರ ಕಡೆಯವನೆಂಬುದು ಅರಿವಿಗೆ ಬರುತಲಿದ್ದಿತು.
ಕಾಳೆಗದ ನೆಲದಲ್ಲಿ ಪಡೆಯ ಕಣ್ಣಿನ ನೋಟಕ್ಕೆ ತಡೆಯಾಗಿ ತುಂಬಿರುವ
ಧೂಳಿಯು ಎಲ್ಲೆಲ್ಲಿಯೂ ಆವರಿಸಿದ ಕತ್ತಲಾಯಿತು. ಬಿಲ್ಲಾಳುಗಳು
ಬಿಡುವ ಅಂಬುಗಳ ಪೆಟ್ಟು ಬಿದ್ದು, ಆನೆ, ಕುದುರೆ, ಕಾಲಾಳುಗಳ ಮೈಗಾ
ಯಗಳಿಂದ ಹೊರಡುವ ನೆತ್ತರಿನ ಹೊಳೆಯು ಬಾಲಸೂರ್ಯನಾಗಿದ್ದಿತು.
ಎಲ್ಲ ಕಡೆಗಳಲ್ಲಿಯೂ ಅಡರಿರುವ ಧೂಳಿಯು ರಕ್ತಪ್ರವಾಹದಿಂದ
ಬುಡವು ಕತ್ತರಿಸಿ ಹೋಗಲು, ಮೇಲ್ಭಾಗದಲ್ಲಿ ಗಾಳಿಯಿಂದ ಅಲು
ಗುತಲಿರುವುದಾಗಿ, ಇದ್ದಲಾದ ಬೆಂಕಿಯಿಂದ ಮೊದಲು ಹೊರಟದ್ದು

ಹೊಗೆಯಂತೆ ಕಾಣಬರುತ್ತಿದ್ದಿತು. ಬಡಿದಾಟದಲ್ಲಿ ರಥಿಕರಿಗೆ ಪೆಟ್ಟು ಬಿದ್ದು ಮೂರ್ಛೆಯುಂಟಾದರೆ, ಬೇರೊಂದುಕಡೆಗೆ ಕರೆದೊಯ್ದು ಉಪಚರಿಸುವುದು ತಮ್ಮಧರ್ಮವೆಂದು ಸಾರಥಿಗಳು ಹಾಗೆ ಮಾಡಿದಲ್ಲಿ, ಮೂರ್ಛೆ ತಿಳಿದೆಚ್ಚೆತ್ತಕೂಡಲೆ, ಆ ರಥಿಕರು ಸಾರಥಿಯನ್ನು ಕುರಿತು ಅನುಚಿತವನ್ನು ಮಾಡಿದೆ ಎಂದು ಜರದು, ಮರಳಿ ರಣಭೂಮಿಗೈತಂದು, ಮೊದಲು ತಮ್ಮನ್ನು ಅಂಬಿನಿಂದಿಟ್ಟ ರಥಿಕನನ್ನು, ಧ್ವಜದಿಂದ ಗುರುತು ಹಿಡಿದು ಹೋರಾಡತೊಡಗುತಿದ್ದರು, ಒಬ್ಬ ರಥಿಕನೆಸೆದ ಬಾಣವು ಬೇರೊಬ್ಬ ರಥಿಕನ ಬಾಣದಿಂದ ಅರೆದಾರಿಯಲ್ಲಿ ಕತ್ತರಿಸಲ್ಪಟ್ಟರೂ, ಅವರಲ್ಲಿ ಉಳಿದ ಅಲಗಿನ ಅರ್ಧಭಾಗವೇ ಪ್ರಯೋಗಕಾರನ ಕರಲಾಘವವೇಗದ ಬಲ್ಮೆಯಿಂದ ಗುರಿಹಿಡಿದು, ಇದಿರಾಳಿಗೆ ಬಂದು ಬಡಿಯುತಲಿದ್ದಿತಲ್ಲದೆ ನಡುವೆ ಬೀಳುತಲಿರಲಿಲ್ಲ. ಆನೆಗಳ ಕಾಳೆಗದಲ್ಲಿ ಮೇಲೆ ಕುಳಿತಿರುವ ಮಾವಟಿಗರೊಳಗೆ ಒಬ್ಬರನ್ನೊಬ್ಬರು ಮೊನೆಯಾದ ಆಯುಧಗಳಿಂದ ಹೊಡೆವಾಗ-ಕತ್ತರಿಸಲ್ಪಟ್ಟು ಮೇಲಕ್ಕೆ ಹಾರಿದ ಶಿರಗಳು ಅಕಾಶದಲ್ಲಿ ಹಾರುತಲಿರುವ ಡೇಗೆ ಹಕ್ಕಿಗಳ ಕಾಲಿನುಗುರುಗಳಿಗೆ ಸಿಲುಕಿ, ಸ್ವಲ್ಪ ಹೊತ್ತಿನಮೇಲೆಯೇ ನೆಲಕ್ಕೆ ಉರುಳುತಲಿದ್ದುವು. ಒಬ್ಬ ಅಶ್ವಸಾದಿಯು ಬೇರೊಬ್ಬ ಅಶ್ವವಾಹನನ್ನು ಹೊಡೆದು, ಕುದುರೆಯ ಬೆನ್ನಿನಮೇಲೆ ಮೂರ್ಛೆಗೆಡಹಿದಬಳಿಕ, ಅವನು ಮತ್ತೊಂದು ಪೆಟ್ಟನ್ನು ತಾಳಲಾರನೆಂದರಿತರೆ, ಮೊದಲಿನವನು-ಮರಳಿ ಹೊಡೆಯದಿದ್ದುದು ಮಾತ್ರವಲ್ಲದೆ, ಹಗೆಯನ್ನುಪಚರಿಸಬಲ್ಲ ಆಳನ್ನು ಬಯಸುತಲಿರುವನು. ದೇಹಾಭಿಮಾನವಿಲ್ಲದೆ ಕವಚಧಾರಿಗಳಾದ ವೀರರು - ಕಾಳಗಕ್ಕೆಳಸಿ ಬಂದು, ಒರೆಗಳನ್ನು ಹಿರಿದು ಬೀಸಿದ ಖಡ್ಗಗಳು, ತೋರವಾದ ಕೊಂಬುಗಳಮೇಲೆ ಬಿದ್ದು, ಚಂಕಿಯ ಕಿಡಿಗಳನ್ನೆಬ್ಬಿಸಲು, ಹೆದರಿದ ಆನೆಗಳು ಸೊಂಡಿಲುಗಳ ಫೂತ್ಕಾರದಿಂದ ಹೊರಟ ಹನಿಗಳಿಂದಲೂ, ಗಾಳಿಯಿಂದಲೂ ಆರಿಸುತಲಿದ್ದುವು. ಶರಗಳಿಂದ ಇರಿಯಲ್ಪಟ್ಟ ಶಿರಗಳೆಂಬ ಹಣ್ಣುಗಳಿಂದಲೂ, ತಲಕಳಗಾಗಿ ಉರುಳಿದ ತಲೆಪಾಗುಗಳೆಂಬ ಪಾನಪಾತ್ರೆಗಳಿಂದಲೂ, ಹರಿಯುತಲಿರುವ ರಕ್ತದ ಕಾಲುವೆಯೆಂಬ ಮದ್ಯರಸದಿಂದಲೂ, ರಣಭೂಮಿಯು ಮೃತ್ಯುವಿಗೆ ಪಾನಭೂಮಿಯಂತಿದ್ದಿತು. ರಣಾಂಗಣದಲ್ಲಿ ತುಂಡುತುಂಡಾಗಿ ಉರುಳಿರುವ ವೀರರ ತೋಳುಗಳನ್ನು, ಹಕ್ಕಿಗಳು

ಕೊಕ್ಕಿನಿಂದ ಕುಕ್ಕುತಲಿರುವುದಂ ಕಂಡು, ಅವುಗಳನ್ನು ಹೆದರಿಸಿ, ಹಾರಿಸಿ, ತಾವುಸೆಳೆದು ತರುವಲ್ಲಿ, ಆ ಬಾಹುಖಂಡದ ಬುಡದಲ್ಲಿದ್ದ ಬಾಪುರಿಯ ತುದಿಯು ದವಡೆಗೆ ಬಡಿಯಲು, ಮಾಂಸವನ್ನು ತಿನ್ನಬೇಕೆಂಬ ಬಯಕೆಯು ಬಲವಾಗಿದ್ದರೂ, ಹೆಣ್ಣುನರಿಗಳು ಅವುಗಳನ್ನು ತೊರೆದು ದೂರ ಸರಿಯುತಲಿದ್ದುವು.

ಆ ಯುದ್ಧಭೂಮಿಯಲ್ಲಿ ಒಬ್ಬ ವೀರನು - ಹಗೆಯ ಕರವಾಳದಿಂದ ತನ್ನ ಕತ್ತು ಕತ್ತರಿಸಲ್ಪಟ್ಟು ಧರೆಗುರುಳಲು, ಸಗ್ಗದಿಂದೈತಂದ ವಿಮಾನವನ್ನೇರಿ, ದೇವ ಶರೀರವನ್ನಾಂತು, ತನ್ನ ಎಡದ ತೊಡೆಯಮೇಲೆ ಕುಳಿತಿರುವ ದೇವಾಂಗನೆಯೊಡನೆ, ಕಾಳಗವಿಳೆಯೊಳಗೆ ಕುಣಿಯುತಲಿರುವ ತನ್ನ ಪೂರ್ವದೇಹದ ಮುಂಡವನ್ನು ನೋಡುತ್ತಾ ತೆರಳುತಲಿದ್ದನು. ಕೆಲವುಮಂದಿ ರಥಿಕರಾದ ವೀರರು ಒಬ್ಬೊಬ್ಬರ ಸಾರಥಿಗಳೂ ಮಡಿದುಹೋಗಲು, ಅವರೇ ಸಾರಥಿಗಳಾಗಿಯೂ, ರಥಿಕರಾಗಿಯೂ ಆಗುತ್ತಿದ್ದರು. ಕುದುರೆಗಳು ಅಳಿಯಲು, ಗದಾಯುದ್ಧದಲ್ಲಿ ತೊಡಗುವರು. ಆಯುಧಗಳು ಮುರಿಯಲು, ಬಾಹುಯುದ್ಧಕ್ಕೆ ತೊಡರಿ ಅಸುಗಳನ್ನು ನೀಗಿಕೊಳ್ಳುತಲಿದ್ದರು. ಮತ್ತೊಂದೆಡೆ ಇಬ್ಬರು ವೀರರು- ಸಮರಾಂಗಣದಲ್ಲಿ ಬಡಿದಾಡತೊಡಗಿದರು. ಇಬ್ಬರಿಗೂ ಗಾಯಗಳಾಗಿ ಈರ್ವರೂ ಮಡಿದು ಸಮಕಾಲದಲ್ಲಿಯೇ ಇಬ್ಬರ ಉಸಿರ್ಗಳೂ ಹಾರಿಹೋದುವು. ಇಬ್ಬರೂ ಏಕಕಾಲದಲ್ಲಿ ದೇವಶರೀರವನ್ನು ಪಡೆದರು. ಒಬ್ಬ ದೇವಾಂಗನೆಯನ್ನೇ, ನಾನು ವರಿಸಬೇಕು, ತಾನು ವರಿಸಬೇಕು ಎಂದು ದೇವತ್ವದಲ್ಲಿಯೂ ಹಗೆತನದ ವಿವಾದವು ತಪ್ಪಲಿಲ್ಲ. ಇಬ್ಬರು ಒಂದೇ ಭೋಗ್ಯವಸ್ತುವಿನಲ್ಲಿ ಬಯಕೆಗೊಂಡರೆ ವೈರವು ತಪ್ಪದು. ರಚನೆಯಿಂದ ನಿಂತಿರುವ ಎರಡು ಸೇನೆಗಳೂ ಒಂದರಹಿಂದೆ ಒಂದಾಗಿ ಹರಿದು ಬರುತಲಿರುವ, ಗಾಳಿಗಳಿಂದ ಬೆಳೆದ ದೊಡ್ಡ ಕಡಲಿನ ಅಲೆಗಳಂತೆ ನೆಲೆಯಿಲ್ಲದ ಸೋಲುಗೆಲುವುಗಳನ್ನು ಪಡೆಯುತಲಿದ್ದುವು.

ಬಳಿಕ ಮಹಾ ಬಲಶಾಲಿಯಾದ ಅಜನು - ಪರಬಲದಿಂದ ತನ್ನ ದಳವು ಸೋಲನ್ನು ಪಡೆಯುತಲಿದ್ದರೂ, ಹಿಂಜರಿಯದೆ, ಅರಿಸೇನಿಯನ್ನೇ ಇದಿರಿಸಿ ತೆರಳಿದನು. ಹುಲ್ಲಿನ ಬಣಬೆಯಿಂದ ಹೊಗೆಯನ್ನು, ಗಾಳಿಯು ಎತ್ತ ಸೆಳೆಯುವುದೋ, ಉರಿಯನ್ನೂ ಅತ್ತಲೇ ಸೆಳೆಯುವುದಲ್ಲವೆ?

ಅಸಹಾಯಶೂರನೆನಿಸಿ ಕೊಬ್ಬಿರುವ ಅಜಕುಮಾರವೀರನು - ಕವಚ ವನ್ನಿಳವಟ್ಟು, ಬತ್ತಳಿಕೆಯನ್ನು ಧರಿಸಿ, ಬಿಲ್ಲನ್ನು ಹಿಡಿದು, ರಥಿಕನಾಗಿ ಕುಳಿತು, ಮಹಾ ವರಾಹರೂಪವನ್ನು ಧರಿಸಿದ ನಾರಾಯಣನು-ಪ್ರಳಯ ಸಮಯದೊಳಗೆ ಉಕ್ಕಳಿಸುತಲಿರುವ ಸಾಗರದ ಜಲವನ್ನು ಹೇಗೋ ಹಾಗೆ, ಹಗೆಗಳ ಪಡೆಯನ್ನು ಅಡಗಿಸುತ ಬಂದನು. ಆ ಆಜಿಯಲ್ಲಿ ಅವನು - ಬಲು ಅಂದವಾದ ಬಲಗಯ್ಯಿಂದ ಬತ್ತಳಿಕೆಯ ಮೂಲಕ ಬಾಣಗಳನ್ನು ಹಿರಿಯುತಲಿದ್ದುದು ಮಾತ್ರವೇ ಗೋಚರಿಸುತಲಿದ್ದಿತು. ಶರಸಂಧಾನ ಮುಂತಾದುದೊಂದೂ ಗೊತ್ತಾಗುತಲಿರಲಿಲ್ಲ. ಕಿವಿಯವರೆಗೆ ಬಾರಿಬಾರಿ ಸೆಳೆದ ಹೆದೆಯು - ಹಗೆಗಳನ್ನಿರಿಯುವ ಹಲವು ಬಾಣಗಳನ್ನು ಹಡೆಯುತಲಿದೆಯೋ ಎಂಬಂತಿದ್ದಿತು. ವೀರಾಗ್ರಗಣ್ಯನಾದ ಅಜನು - ಅರಿಗಳ ಕೊರಳುಗಳನ್ನರಿದು, ಶಿರಗಳನ್ನು ಹರಡಿ, ರಣಭೂಮಿಯನ್ನು ಹೊದಿಸಿದನು. ಆ ತಲೆಬುರುಡೆಗಳು - ರೋಷದಿಂದ ತುಟಿಗಳನ್ನು ಕಡಿದಿದ್ದುವು, ಕೆಳದುಟಿಗಳಲ್ಲಿ ಕೆಂಪು ಅಡರಿದ್ದಿತು. ಹಣೆಗಳಲ್ಲಿ ಕಣ್ಣುಹುಬ್ಬುಗಳು ಗಂಟಿಟ್ಟ ಗೆರೆಗಳು ಕಾಣಬರುತಲಿದ್ದುವು.

ತದನಂತರದಲ್ಲಿ-ಆನೆ, ಕುದುರೆ, ತೇರು, ಕಾಲಾಳುಗಳೆಂಬ ಸರ್ವ ಸಾಧನಗಳನ್ನೂ ಸಿದ್ಧಪಡಿಸಿಕೊಂಡು, ಅರಿಯ ಕವಚವನ್ನಿರಿಯುವ ಸರ್ವಾಯುಧಗಳನ್ನೂ ಹಿಡಿದು, ಸಮರಭೂಮಿಯಲ್ಲಿ ಸರ್ವ ಪ್ರಯತ್ನ ದಿಂದಲೂ ಸನ್ನದ್ಧರಾಗಿ, ರೋಷಪರವಶರಾದ ಸರ್ವೋರ್ವೀಪಾಲರೂ ಸೇರಿ ಅಜಕುಮಾರನನ್ನು ಹೊಡೆದರು. ಅರಿಗಳ ಶರಪರಂಪರೆಯಿಂದ ತೇರು ಮುಚ್ಚಲ್ಪಟ್ಟಿತ್ತು, ರಥಧ್ವಜದ ತುದಿಯಿಂದ ಮಾತ್ರವೇ ಅಜನು ಕಾಣಬರತಕ್ಕವನಾಗಿದ್ದುದರಿಂದ, ಮಂಜಿನಿಂದ ಮುಚ್ಚಲ್ಪಟ್ಟಿರುವ ಮುಂಜಾನೆಯು - ತುಸ ಬೆಳಕನ್ನೊಳಗೊಂಡಿರುವ ರವಿಯಿಂದ ಹೇಗೋ ಹಾಗೆ ಕಂಗೊಳಿಸುತಲಿದ್ದನು.

ಅಹಹ!! ಅಜಕುಮಾರನಿಗೆ ಬಹಳ ಒಳ್ಳೆಯ ಸಮಯವು ಸಮನಿಸಿತ್ತು, ಕುಸುಮಶರನಂತೆ ಸುಕುಮಾರನಾದ ಮಹಾರಾಜನಂದನನು ಎಚ್ಚರಗೊಂಡನು. ಪೂರ್ವದಲ್ಲಿ ಪ್ರಿಯಂವದನೆಂಬ ಗಂಧರ್ವನಿಂದ ಪಡೆದಿದ್ದ ಗಾಂಧರ್ವಾಸ್ತ್ರವನ್ನು ನೆನೆದನು, ನಿದ್ರೆಯಲ್ಲಿ ಮುಳುಗಿಸುವ ಆ ಅಸ್ತ್ರವನ್ನು ಭೂಪವಿರೋಧಿಯರಮೇಲೆ ಪ್ರಯೋಗಿಸಿದನು. ಬಳಿಕಲಾ ನರಪಾಳ

ಸೈನ್ಯವು - ಬಿಲ್ಲಿನ ಹೆದೆಯನ್ನು ಸೆಳೆವುದರಲ್ಲಿ ಮುಂದರಿಯದ ಕರಗಳಿಂ ದೊಡಗೂಡಿ, ಒಮ್ಮೊಗನಾಗಿ ಹೆಗಲಿನಕಡೆಗೆ ಜೋತ ತಲೆಪಾಗುಗಳನ್ನು ಳ್ಳುದಾಗಿ, ರಥಧ್ವಜಸ್ತಂಭಗಳಿಗೆ ದೇಹಗಳನ್ನೊರಗಿಸಿ ನಿದ್ರಾಪರವಶ ವಾಯಿತು. ಆ ಹಿಂದೆ ರಘುಕುಮಾರನು - ಇಂದುಮತಿಗೆ ಪ್ರೀತಿಪಾ ತ್ರವೆನಿಸಿದ ತನ್ನ ಕೆಳತುಟಿಯಮೇಲೆ ವಿಜಯಶಂಖವನ್ನಿಟ್ಟು ಮುಖಮಾರು ತದಿಂದ ದನಿಗೈಸಿದನು. ಅಂತಪ್ಪ ಜಯಜಲಜನಿನದದಿಂದ ಅದ್ವಿತೀಯ ವೀರನೆನಿಸಿ, ತನ್ನ ತೋಳುಬಲದಿಂದ ಗಳಿಸಲ್ಪಟ್ಟುದಾಗಿ, ಶರೀರವನ್ನಾಂತಿ ರುವ ಯಶಸ್ಸನ್ನು ಪಾನಮಾಡುತಲಿರುವವನಂತೆ ವಿರಾಜಿಸುತ್ತಲಿದ್ದನು. ಅದುವರೆಗೆ ಪಲಾಯನರಾಗಿದ್ದ ಸೈನಿಕರು-ಅಜನ ವಿಜಯ ಶಂಖಧ್ವನಿ ಯನ್ನು ಕೇಳಿದರು. ಕೂಡಲೇ, ಓಹೋ! ನಮ್ಮ ದೊರೆಗೆ ಜಯವುಂ ಟಾಯಿತೆಂದು ತಿಳಿದು, ಹಿಂತಿರುಗಿ ಓಡಿಬಂದರು. ಹಗೆಗಳ ಪಡೆಯೆಲ್ಲ ಮೈಮರೆತು ಮಲಗಿರುವುದನ್ನೂ, ಅದರ ನಡುವೆ - ಮುಗಿದ ತಾವರೆಗಳ ಮಧ್ಯದಲ್ಲಿ ಪ್ರತಿಬಿಂಬಿಸಿದ ಚಂದ್ರನಂತಿರುವ ಅಜಕುಮಾರನನ್ನೂ ಅವಲೋಕಿಸಿದರು.

ತರುವಾಯ ರಘುಪುತ್ರನು-ಬಾಣದಲಗಿನ ತುದಿಯನ್ನು ರಕ್ತದಲ್ಲಿ ಅದ್ದಿಸಿ, ಶತ್ರುರಾಜರ ಧ್ವಜಪಟಗಳಲ್ಲಿ " ಎಲೈ ದೊರೆಗಳಿರಾ ! ಈಗ ರಘುವೀರ ಕುಮಾರನು ಕರುಣೆಯಿಂದ ನಿಮ್ಮ ಯಶಸ್ಸನ್ನು ಮಾತ್ರವೇ ಅಪಹರಿಸಿದನಲ್ಲದೆ, ಪ್ರಾಣಗಳನ್ನಲ್ಲ " ಎಂದೀಪ್ರಕಾರವಾಗಿರುವ ವರ್ಣ ವಳಿಯನ್ನು ಸೇವಕರಿಂದ ಬರೆಯಿಸಿದನು.. ಅಲ್ಲಿಂದ ಬಿಲ್ಲಿನ ತುದಿಯನ್ನು ಒಂದು ಕೈಯಿಂದ ಹಿಡಿದು ನೆಲದಮೇಲೆ ಊರುತ್ತಾ, ಮತ್ತೊಂದು ಕರ ದಿಂದ ತಲೆಪಾಗನ್ನು ತೆಗೆದು, ಕೆದರಿದ ತಲೆಗೂದಲುಳ್ಳವನೂ, ಹಣೆಯಲ್ಲಿ ತುಂಬಿದ ಬೆವರಿನ ಹನಿಗಳುಳ್ಳವನೂ ಆಗಿ ಬರುತಲಿರುವ ಅಜನು - ಪ್ರಿಯಳಾದ ಇಂದುಮತಿಯು ತಡಿಗೆ ಭೇಗನ್ನೈತಂದು, ಹೆದರಿರುವಾ ಕೆಯನ್ನು ಕುರಿತು ಇಂತೆಂದನು—

ಎಲೌ ವಿದರ್ಭರಾಜ ನಂದಿನಿಯೇ ! ನಾನು ಒಪ್ಪಿರುವೆನು, ಇತ್ತ ನೋಡು, ಸಮರಭೂಮಿಯಲ್ಲಿ ಪವಳಿಸಿರುವ ಈ ಹಗೆತನದ ಭೂಪವಿಯಾ ಣ್ಮರ ಆಯುಧಗಳನ್ನೆಲ್ಲ ಎಳೆಯ ಹುಡುಗರು ಸೆಳೆಗೊಯ್ಯುತಲಿರುವರು. ಈ ವಿಧವಾದ ರಣಚೇಷ್ಟೆಯಿಂದೊಡಗೂಡಿರುವ ದೊರೆಮಕ್ಕಳು-ನನ್ನ

ಕರಗತಳಾಗಿರುವ ಈ ನಿನ್ನನ್ನು ಪಡೆಯಬೇಕೆಂದು ಬಯಸುತಲಿದಾರೆ, ಎಂದ ಅಜಕುಮಾರನ ಮೃದುಮಧುರವಾದ ನುಡಿಯು - ಕಿವಿಯನ್ನು ಹೊಕ್ಕಕೂಡಲೆ - ವೈರಿಗಳಿಂದುಂಟಾಗಿದ್ದ ವ್ಯಥೆಯಿಂದ ದೈನ್ಯವನ್ನು ಪಡೆದಿದ್ದ ಇಂದುಮತಿಯ ವದನಾರವಿಂದವು - ನಿಟ್ಟುಸಿರಿನ ಬಿಸಿಯು ತೊಲಗಲು, ಕನ್ನಡಿಯಂತೆ ತನ್ನ ಸ್ವಾಭಾವಿಕವಾದ ನೈರ್ಮಲ್ಯವನ್ನು ಪಡೆದು ಬೆಳಗಿತು. ಯದ್ಯಪಿ, ಇಂದುಮತಿಯು ಪ್ರಿಯವಲ್ಲಭನ ವಿಜಯದಿಂದ ಬಹಳವಾಗಿ ಹರ್ಷಿತಳಾದಳು. ಆದರೂ ನಾಚಿಕೆಗೆ ಒಳಗಾಗಿದ್ದುದರಿಂದ ಪತಿಯ ಪರಾಕ್ರಮವನ್ನು ಇದಿರಿಗೆ ಹೊಗಳಲಾರದೆ ಹೋದಳು. ಮುಂಗಾರು ಮಳೆಯ ಹನಿಗಳಿಂದ ನನೆದ ಬೈಲುನೆಲವು - ಮಯೂರಗಳ ಕೇಕಾರವಗಳಿಂದ ಮೋಘಸಮುದಾಯವನ್ನು ಹೇಗೋ ಹಾಗೆ, ತನ್ನ ಗೆಳತಿಯರ ಮುಖದಿಂದ ಅಭಿನಂದಿಸಿದಳು.

ದೋಷರಹಿತನಾದ ಆ ಅಜಕುಮಾರನು - ಇಂತು ವೈರಿಗಳ ಸಿರಗಳಮೇಲೆ ತನ್ನಡಿಗಾಲನೂರಿ, ನಿರ್ದುಷ್ಟಳಾದ ಇಂದುಮತಿಯನ್ನು ಸ್ವಾಧೀನಪಡಿಸಿಕೊಂಡನು. ತೇರಿನ ಕುದುರೆಗಳ ಧೂಳಿಯಿಂದ ತುಂಬಿದ ಮುಂಗೂದಲುಳ್ಳ ಆ ಭೋಜಕನ್ಯೆಯೇ ರಘುರಾಜನಂದನನಿಗೆ ಸಾಕ್ಷಾತ್ತಾಗಿ ಬಂದ ಸಮರವಿಜಯ ಲಕ್ಷ್ಮಿಯಾದಳು. ಅಜನು ವಿವಾಹವಿಜಯ ಲಕ್ಷ್ಮಿಯಿಂದೊಡಗೂಡಿದನೆಂಬ ಸುದ್ದಿಯು ರಘುರಾಜನಿಗೆ ಮೊದಲೇ ಮುಟ್ಟಿದ್ದಿತು. ಅದುವರೆಗೆ ಶ್ಲಾಘ್ಯಳಾದ ಜಾಯೆಯಿಂದೊಡಗೂಡಿ ಜಯಶಾಲಿಯಾದ ಅಜನೂ ಹಿಂದಿರುಗಿ ಬಂದನು. ರಘುವು - ಆ ಕುಲಕುಮಾರನಂ ಕಂಡು ಅಭಿನಂದಿಸಿದನು. ಕುಟುಂಬದ ಭಾರವನ್ನು ಅವನಮೇಲೆ ಹೊರಿಸಿದನು. ತಾನು ಮೋಕ್ಷಮಾರ್ಗವಲ್ಲಿ ಅಡಿಯಿಡಲೆಳಸಿದನು. ಕುಲಧರ್ಮವನ್ನು ಹೊತ್ತು ನೆರವೇರಿಸತಕ್ಕ ಕುಮಾರನು ದೊರೆತಮೇಲೆ, ಸೂರ್ಯವಂಶವರಸರಿಗೆ ಗೃಹಸ್ಥಾಶ್ರಮವನ್ನು ದಾಟುವುದರಲ್ಲಿಯೇ ಅಭಿರುಚಿ.

— ಇಂತು - ಅಜಪಾಣಿಗ್ರಹಣವೆಂಬ ಏಳನೆಯ ಅಧ್ಯಾಯಂ —



ಶ್ರೀಃ.

ಶ್ರೀ ಶಾರದಾಮ್ಬಾಯೈ ನಮಃ.

## ಅಷ್ಟಮಾಧ್ಯಾಯಂ.



ಸೂಚನೆ॥ ಅರಿಗಳ ನಿರಿದಜ ನೈತರೆ
ಸಿರಿಯು ನವಂಗಿತ್ತು ಪೊಕ್ಕನಾ ರಘು ಬನಮಂ ।
ಅರಸಿಯು ವಿರಹದೊಳಜನುಂ
ಕರಗಿದನುರೆ ದುಗುಡದಿಂದೆ ದಶರಥನೆಸೆದಂ ॥

ತರುವಾಯ - ಅಜನ ಕರವಿನ್ನೂ, ಮಂಗಳಕರವೆನಿಸಿದ ವಿವಾಹದ ಕಂಕಣಬಂಧದಿಂದ ಕಂಗೊಳಿಸುತಲಿರುವಾಗಲೇ, ಎರಡನೆಯ ಇಂದುಮತಿಯಂತಿರುವ ರಾಜ್ಯಲಕ್ಷ್ಮಿಯನ್ನೂ, ರಘುಭೂಪಾಲನು - ಆತನ ಕೈಸೇರಿಸಿದನು. ಆದರೆ - ಲೋಕದಲ್ಲಿ - ಅರಸುಮಕ್ಕಳು ವಿಷಪ್ರಯೋಗವೇ ಮೊದಲಾದ ಮಹಾಪಾಪದ ಕೆಲಸಗಳನ್ನು ಮಾಡಿಯಾದರೂ, ಪರರ ಕಯ್ಯಿಂದ ರಾಜ್ಯವನ್ನು ಕಸುಗೊಂಡು ವಶಮಾಡಿಕೊಳ್ಳಲು ಪ್ರಯತ್ನಿಸುವುದು ದಿಟ. ಈ ಅಜರಾಜನುಮಾತ್ರ ತಾನಾಗಬಂದ ಸಾಮ್ರಾಜ್ಯವನ್ನು ತಂದೆಯ ಆಣತಿಗೆ ಅಡಿಯಾಳಾಗಿ ಪರಿಗ್ರಹಿಸಿದನಲ್ಲದೆ ಸುಖದಾಶೆಯಿಂದಲ್ಲ. ಕುಲಗುರುವಾದ ವಶಿಷ್ಠಮುನಿಯೂ - ಸಂಪ್ರದಾಯವನ್ನನುಸರಿಸಿ ಅಭಿಷೇಕೋತ್ಸವದಲ್ಲಿ ಮಂಗಳಪೀಠದಮೇಲೆ ಕುಳಿತ ಅಜನನ್ನೂ, ಭೂಮಿಯನ್ನೂ ಪಾವನವಾದ ಮಂತ್ರೋದಕದಿಂದ ಪ್ರೋಕ್ಷಿಸಿದನು. ಆಗಲಾ ವಸುಮತಿಯೂ - ವ್ಯಕ್ತವಾಗಿ ಉಬ್ಬಿ, ಗುಣವಂತನಾದ ಪತಿಯು ದೊರೆತುದರಿಂದ ತನಗುಂಟಾದ ಆನಂದವನ್ನು ಕೃತಾರ್ಥತೆಯೊಂದಿಗೆ ಸೂಚಿಸುವಂತಿದ್ದಿತು. ಇದರಿಂದ ತಂದೆಗೊಂದು ಕೊರತೆಯಿಲ್ಲ, ಏಕೆಂದರೆ—ಪಿತನು - "ಹೆರರಿಂದ ತನಗೆ ಗೆಲುವನ್ನೂ, ಮಗನಿಂದ ಸೋಲನ್ನೂ ಬಯಸಬೇಕು" ಎಂದು ಹಿರಿಯರ ಒಪ್ಪಿತವೇ ಉಂಟಲ್ಲವೆ? ಅಥರ್ವವಿದನಾದ ಆ ಗುರುವಶಿಷ್ಠಮುನಿಯಿಂದ ವಿಧಿಪ್ರಕಾರ

ಪಟ್ಟಾಭಿಷೇಕೋತ್ಸವವನ್ನು ಪಡೆದ ಅಜನು - ಪರರಿಗಸದಳವೆನಿಸಿದ ತೇಜವನ್ನೊಳಗೊಂಡನು. ಕ್ಷತ್ರತೇಜದಿಂದೊಡಗೂಡಿದ ಬ್ರಹ್ಮತೇಜವು ಗಾಳಿಬೆಂಕಿಗಳ ಸೇರ್ವೆಯಂತೆ ಬಲವಾಗಿ ಬೆಳಗುವುದಲ್ಲವೆ ? ಬಳಿಕ ಪ್ರಜೆಗಳು - ಹೊಸಬನಾದ ಅಜಮಹಾರಾಜನನ್ನು, ಮುಪ್ಪಿನಿಂದ ಹಿಂದಿರುಗಿ ಹರಯವನ್ನು ಪಡೆದ ರಘುರಾಜನನ್ನಾಗಿಯೇ ಭಾವಿಸಿದರು. ಏಕೆಂದರೆ—ಅಜನು - ರಘುವಿನಿಂದ ಧರೆಯ ಸಿರಿಯನ್ನು ಮಾತ್ರವೇ ಪಡೆಯಲಿಲ್ಲ, ಆತನ ಸಕಲ ಸುಗುಣಗಳನ್ನೂ ಸ್ವೀಕರಿಸಿಯೇ, ಇದ್ದನು. ಅಜನ ಆಳ್ವಿಕೆಯಲ್ಲಿ - ಶುಭಕರವೆನಿಸಿದ ಅಜನಿಂದೊಡಗೂಡಿ ಏಳಿಗೆಯೊಳಿರುವ ರಾಜ್ಯವೊಂದು, ಮಂಗಳಕರವೆನಿಸಿ, ಇಂದ್ರಿಯಜಯರೂಪವಾಗಿರುವ, ವಿನಯದಿಂದ ಸಂಪನ್ನವಾದ ಅಜನ ಹೊಸದಾದ ಯೌವನವೊಂದು, ಈ ಎರಡೂ ಚೆನ್ನಾಗಿ ಹೊಂದಿಕೊಂಡು ಬಹಳವಾಗಿ ಶೋಭಿಸುತಲಿದ್ದುವು. ಅಜನು - ಅಂತಹ ರಾಜ್ಯಲಕ್ಷ್ಮಿಯನ್ನು ಪಡೆದರೂ ಹೆಮ್ಮೆಗೀಡಾಗಲಿಲ್ಲ.

ಮಹಾಭುಜಬಲಸಂಪನ್ನನಾದ ಅಜನು - ಹೊಸದಾಗಿ ಕೈಹಿಡಿದ ವಧುವಿನಂತೆ, ನೂತನವಾಗಿ ಕೈಸೇರಿರುವ ಮೇದಿನಿಯನ್ನು, ಕ್ರೂರನಾಗದೆ ಸನಯನಾಗಿ ಅನುಭವಿಸುತ ಬಂದನು. ಆ ಅಜನ ಆಳ್ವಿಕೆಯಲ್ಲಿ ಪ್ರಜೆಗಳೊಳಗೆ ಪ್ರತಿಯೊಬ್ಬನೂ-ನಾನೇ ಅರಸನಿಗೆ ಅತ್ಯಂತ ಮಾನ್ಯನೆನಿಸಿರುವೆನು ಎಂದು ತಿಳಿದುಕೊಂಡಿದ್ದನು. ಏಕೆಂದರೆ - ಸಾವಿರಾರು ಹೊಳೆಗಳು ಎತ್ತೆತ್ತಲಿಂದಲೋ ಬಂದು ಮೇಲೆಮೇಲೆ ಬೀಳುತಲಿದ್ದರೂ, ತಿರಸ್ಕರಿಸದೆ, ಕಡಲು ತನ್ನಲ್ಲಿ ಆಸ್ಪದವನ್ನು ಕೊಡುವಹಾಗೆ, ಅಜನು-ಯಾರೊಬ್ಬರನ್ನೂ ಅಸಡ್ಡೆ ಮಾಡದೆ, ತನ್ನ ಬಳಿ ಅವಕಾಶವನ್ನು ಕೊಡುತಲಿದ್ದುದೇ ಅದಕ್ಕೆ ಮೂಲ. ಅಜನೃಪನು ಅತಿ ಕಠಿನನೆನಿಸಿಕೊಳ್ಳಲಿಲ್ಲ. ಆದರ ಅತಿ ಮೃದುವೂ ಆಗಿರಲಿಲ್ಲ. ನಡುವಣ ಅಂತಸ್ತನ್ನು ಆಶ್ರಯಿಸಿ, ಹಾಗೆಯೇ ಇರುವ ವಾಯುವು ಗಿಡಗಳನ್ನು ಹೇಗೋಹಾಗೆ, ನರಪತಿಗಳನ್ನು ಮೂಲೋತ್ಪಾಟನೆ ಮಾಡದೆಯೇ ಅವರನ್ನು ತಗ್ಗಿಸದನು.

ಬಳಿಕ ರಘುವು - ಸಂಪದದ ಏಳಿಗೆಯಲ್ಲಿಯೂ ವಿಕಾರವನ್ನು ಹೊಂದದೆ, ಸತ್ವಗುಣದಿಂದ ಸಂಪನ್ನನಾಗಿ, ಮಂತ್ರಿಗಳಲ್ಲಿ ನೆಲೆಗೊಂಡ ಆತ್ಮಜನನ್ನು ನೋಡಿ, ಸ್ವರ್ಗದಲ್ಲಿರುವ ಶಬ್ದಾದಿ ವಿಷಯಗಳಲ್ಲಿಯೂ

ಆಶೆಯನ್ನು ತೊರೆದನು. ಇದು ಇವನ ಕುಲಧರ್ಮ, ಹೇಗೆಂದರೆ—
ದಿಲೀಪನ ವಂಶದಲ್ಲುದಿಸಿದ ಅವನಿಪಾಲರೆಲ್ಲರೂ - ಮುಪ್ಪು ಬಂದಾಗ
ಐಶ್ವರ್ಯವನ್ನು ಔರಸರಿಗೊಪ್ಪಿಸಿ, ನಾರುಬಟ್ಟೆಗಳನ್ನುಡುವ ಮುನಿಗಳ
ಹಾದಿಯನ್ನು ಹಿಡಿಯುವುದೇ ವಾಡಿಕೆ. ಅದರಂತೆ ಕಾಡಿಗೆ ಹೊರಡಲು
ಅಣಿಯಾಗುತಲಿರುವ ತಂದೆಯನ್ನು ಕಂಡು ಅಜನು - ಆತನ ಅಡಿದಾವ
ರೆಗಳಲ್ಲಿ ಪಾಗಿನಿಂದ ಬೆಳಗುವ ಶಿರದಿಂದ ಅಡ್ಡಬಿದ್ದು, ಈ ನನ್ನನ್ನು
ಬೈಲುಮಾಡಿ ಹೋಗಕೂಡದೆಂದು ದೈನ್ಯದಿಂದ ಬೇಡುತ ತಡೆದನು.
ಹಾಗೆ ಕಣ್ಣುಗಳಲ್ಲಿ ನೀರುತುಂಬಿ ನಿಂತಿರುವಮಗನನ್ನು ನೋಡಿದ
ರಘುವು - ಪುತ್ರವಾತ್ಸಲ್ಯದಿಂದ, ಇವನನ್ನು ಬಿಟ್ಟು ಹೋಗಬಾರದೆಂದು
ನೆನೆದನು, ಆದರೆ - ಬಿಟ್ಟ ಪರೆಯನ್ನು ಹಾವು ಹೇಗೋ ಹಾಗೆಯೇ,
ತಾನು ತೊರೆದ ಸಿರಿಯನ್ನು ಮರಳಿ ಪಡೆಯಲಿಲ್ಲ. ಹೀಗಾದಮೇಲೆ ಆ
ರಘುವು-ಜಿತೇಂದ್ರಿಯನಾಗಿ ನಾಲ್ಕನೆಯ ಆಶ್ರಮವನ್ನು ಆಶ್ರಯಿಸಿದನು,
ಊರಹೊರಗೆ ದೂರದಲ್ಲಿ ಒಂದು ಗುಡಿಸಿಲಿನಲ್ಲಿ ವಾಸಕ್ಕೆ ನಿಂತನು
ಮಗನ ಅನುಭವಕ್ಕೆ ಒಳಗಾಗಿ ತನಗೆ ಸೊಸೆಯಂತಿರುವ ಸಿರಿಯಿಂದ,
ಹೂವು, ಹಣ್ಣು, ನೀರು ಇವುಗಳನ್ನು ಒದಗಿಸಿಕೊಡುವಷ್ಟು ಮಾತ್ರ
ಸೇವೆಯನ್ನು ಹೊಂದುತಲಿದ್ದನು, ಒಂದುಕಡೆ ಶಾಂತಿಯಲ್ಲಿ ನಿಂತ ರಘುವ
ನ್ನುಳ್ಳುದೂ, ಮತ್ತೊಂದುಕಡೆ ಏಳಿಗೆಯಲ್ಲಿ ಬರುತಲಿರುವ ಅಜನನ್ನು
ಳ್ಳುದೂ ಆಗಿರುವ ಅವರ ಕುಲವು - ಒಂದೆಡೆ ಅಸ್ತಾಭಿಮುಖನಾದ
ಚಂದ್ರನನ್ನೊಳಗೊಂಡುದೂ, ಮತ್ತೊಂದೆಡೆ ಉದಿಸುತಲಿರುವ ರವಿಯ
ನ್ನೊಳಪಟ್ಟುದೂ ಆಗಿರುವ ಮುಗಿಲಿನೊಡನೆ ಸಾಮ್ಯವನ್ನು ಪಡೆಯಿತು.
ಯತಿಭೂಪತಿಗಳ ಲಕ್ಷಣಗಳನ್ನು ತಾಳಿರುವ ಆ ರಘುರಾಘವರನ್ನು ನೋ
ಡಿದ ನಾಡಿನ ಜನರೆಲ್ಲರೂ, ಭೂಮಿಯಲ್ಲಿ ಅವತರಿಸಿ ಇರತಕ್ಕ, ಅಪವರ್ಗೈ
ಶ್ವರ್ಯಗಳಿಗೆ ಸಾಧಕಗಳಾದ ನಿವೃತ್ತಿ ಪ್ರವೃತ್ತಿ ಧರ್ಮಗಳ ಅಂಶಗಳನ್ನಾಗಿ
ಭಾವಿಸಿದರು. ಅಜನು - ವಿಜಯಪದವಿಯನ್ನು ಪಡೆಯಲು ಉಪಾಯ
ಚಿಂತನೆಗಾಗಿ ನೀತಿವಿಶಾರದರಾದ ಮಂತ್ರಿಗಳೊಡನೆ ಕಲೆತನು. ರಘುವು-
ಅಪಾಯವಿಲ್ಲದ ಪರಮಪದವನ್ನು ಹೊಂದಲು ಪದ್ಧತಿಯ ಚಿಂತನೆಗಾಗಿ
ಯಥಾರ್ಥವಾದಿಗಳಾದ ಯೋಗಿಗಳ ಸಂಗಡ ಸೇರಿದನು. ತರುಣನಾ
ಗಿರುವ ಅಜರಾಜನು - ಪ್ರಜಾವ್ಯವಹಾರಗಳ ಗುಣದೋಷಗಳನ್ನು

ವಿಚಾರಮಾಡಲಿಕ್ಕೆ ಧರ್ಮಾಸನವನ್ನು ಏರುತ ಬಂದನು. ಮುಪ್ಪಿನ ಮುದುಕನಾದ ರಘುವಾದರೋ, ಯಮನಿಯಮಾದಿ ಗುಣಗಳಿಂದೊಡಗೂಡಿದ ಮನಸ್ಸನ್ನು ಆತ್ಮನಲ್ಲಿ ನೆರಗೊಳಿಸುವ ಧಾರಣಾಯೋಗವನ್ನು ಅಭ್ಯಾಸಮಾಡಲು ದರ್ಭಾಸನವನ್ನು ಸೇವಿಸುತಲಿದ್ದನು, ಅಜನು-ಕೋಶ, ದಂಡ, ಬಲ ಎಂಬ ಪ್ರಭುಶಕ್ತಿಯ ಸಂಪತ್ತಿನಿಂದ ತನ್ನ ನಾಡಿನ ಪಕ್ಕದ ನಾಡೊಡೆಯರನ್ನು ಅಡಗಿಸಿ ವಶಪಡಿಸಿಕೊಳ್ಳುತಲಿದ್ದನು. ರಘುವಾದರೆ - ಸಮಾಧಿಯ ಅಭ್ಯಾಸದಿಂದ ಶರೀರದೊಳಗಣ ಪ್ರಾಣಗಳನ್ನು ನಿಯಮಿಸತೊಡಗಿದನು. ಹೊಸ ಅರಸಾದ ಅಜನು - ಹಗೆಗಳಾದ ಇಳೆಯಾಣ್ಮರೆಸಗುವ ಪ್ರಯತ್ನಗಳನ್ನು, ಅವುಗಳ ಫಲಗಳೊಂದಿಗೆ ಧ್ವಂಸಮಾಡುತಲಿದ್ದನು. ಹಳಬನಾದ ರಘುವು - ಜನ್ಮಾಂತರಕ್ಕೆ ಬೀಜಗಳಾದ ಕರ್ಮಗಳನ್ನು ಜ್ಞಾನಾಗ್ನಿಯಿಂದ ಭಸ್ಮವನ್ನಾಗಿ ಮಾಡಲು ಉಪಕ್ರಮಿಸಿದನು. ಆ ಇಬ್ಬರಲ್ಲೊಬ್ಬನಾದ ಅಜನು - ಫಲವನ್ನು ಚಿಂತಿಸಿ, ಸಂಧಿ ಮೊದಲಾದ ಗುಣಗಳನ್ನು ಹರಡುತಲಿದ್ದನು. ಇತರನಾದ ರಘುವೂ ಸತ್ವಾದಿ ಗುಣಗಳನ್ನು ಮರಳಿ ವಿಕಾರ ಪಡೆಯದಂತೆ ಮಣ್ಣು ಹೊನ್ನುಗಳನ್ನು ಸಮವಾಗಿ ಭಾವಿಸಿ ಜಯಿಸುತ ಬಂದನು. ನವಪ್ರಭುವಾದ ಅಜನು - ಫಲಸಿದ್ಧಿಯಾಗುವವರೆಗೂ ಸ್ಥಿರಪ್ರಯತ್ನದಲ್ಲಿ ನೆಲೆಗೊಂಡಿದ್ದನಲ್ಲದೆ ಹಿಂಜರಿದು ವಿರಮಿಸುತಲಿರಲಿಲ್ಲ. ಸವೇಕ್ಷರನಾದ ರಘುವು - ಪರಮಾತ್ಮದರ್ಶನವಾಗುವವರೆಗೂ ಸ್ಥಿರಚಿತ್ತನಾಗಿರುತ್ತಾ, ಐಕ್ಯಾನುಸಂಧಾನವೆಂಬ ಯೋಗವಿಧಿಯಿಂದ ಹಿಂದಿರುಗಲಿಲ್ಲ. ಇಂತು ಆ ಉಭಯರೂ-ಜಾಗರೂಕರಾಗಿದ್ದುಕೊಂಡು, ಹಗೆಗಳ, ಮತ್ತು ಇಂದ್ರಿಯಗಳ ಪ್ರಸರಣೆಯನ್ನು ಅಡಗಿಸಿ, ಪ್ರಿಯಶ್ರೇಯಗಳಲ್ಲಿ ಆಸಕ್ತರಾಗಿ, ಈರ್ವರೂ ಉದಯಾಪವರ್ಗಗಳೆಂಬ ಉಭಯ ಸಿದ್ಧಿಯನ್ನೂ ಕ್ರಮವಾಗಿ ಪಡೆದರು

ಅನಂತರದಲ್ಲಿ ರಘುವು - ಸರ್ವಭೂತಗಳಲ್ಲಿಯೂ, ಸಮದೃಷ್ಟಿಯುಳ್ಳವನಾಗಿ, ಅಜನ ಅಭಿಲಾಷೆಯನ್ನು ಅನುಸರಿಸಿ ಕೆಲವು ವರ್ಷಗಳನ್ನು ಕಳೆದು, ಐಕ್ಯಾನುಸಂಧಾನವೆಂಬ ಯೋಗಸಮಾಧಿಯಿಂದ, ನಾಶವಿಲ್ಲದೆ ಅವಿದ್ಯೆಗೆ ಪಾರವೆನಿಸಿರುವ 'ಪರಮಾತ್ಮಸಾಯುಜ್ಯವನ್ನು ಪಡೆದನು.

ಇತ್ತ ಆಹಿತಾಗ್ನಿಯಾಗಿದ್ದ ರಾಘವನಿಗೆ, ರಘುವು ಶರೀರವನ್ನು ತೊರೆದನೆಂಬ ಸುದ್ದಿಯು ತಿಳಿಯಿತು. ಬಹಳಹೊತ್ತು ವ್ಯಥೆಪಟ್ಟು ದುಃಖಿಸಿದನು, “ಸರ್ವಸಂಗ ನಿವೃತ್ತಿಯಿಂದ ಧ್ಯಾನಯೋಗಾಸಕ್ತನಾಗಿ ದೇಹತ್ಯಾಗವನ್ನು ಮಾಡಿದ ಯೋಗಿಗೆ ದಹನಕರ್ಮವೂ, ಪಿಂಡೋದಕ ಕ್ರಿಯೆಗಳೂ ಇಲ್ಲ, ಇಂತಹ ಭಿಕ್ಷುವಿನ ಕಳೇಬರವನ್ನು ಬಿಲದಲ್ಲಿ ನಟ್ಟು, ಪ್ರಣವದಿಂದ ಪ್ರೋಕ್ಷಣಾದಿಗಳನ್ನು ನೆರವೇರಿಸಬೇಕು” ಎಂಬ ವಿಧಿಯನ್ನು ಬಲ್ಲವನಾಗಿದ್ದುದರಿಂದ, ಹಾಗೆಯೇ ಇದ್ದ ಆತನಿಗೆ, ಅದೇ ವಿಧಿಯನ್ನು ಅನುಸರಿಸಿ, ಯತಿಗಳ ಸಹಾಯದಿಂದ ಅಗ್ನಿಸಂಸ್ಕಾರವಿಲ್ಲದ ಅಂತ್ಯೇಷ್ಟಿಯನ್ನು ಕ್ರಮವಾಗಿ ನೆರವೇರಿಸಿದನು.

ಯದ್ಯಪಿ-ಜನಕನಿಗೆ ಮಾಡಬೇಕಾದ ತಿಲೋದಕ, ಪಾರ್ವಣ, ದಾನ ಮೊದಲಾದ ಪಿತೃಕಾರ್ಯದ ಕಲ್ಪವನ್ನೆಲ್ಲ ತಿಳಿದಿರುವ ಆ ಅಜನು - ಆಗ ಪಿತೃಭಕ್ತಿಯಿಂದ ರಘುವಿಗೆ ಔರ್ಧ್ವದೈಹಿಕ ಕರ್ಮವನ್ನೆಲ್ಲ ಮಾಡಿದನು. ಆದರೆ - ಯೋಗಮಾರ್ಗದಿಂದ ಶರೀರವನ್ನು ತೊರೆದ ಆ ರಘುವಿನಂತಹ ಮಹಾತ್ಮರು - ಮಕ್ಕಳು ಕೊಡುವ ಪಿಂಡದಾನಾದಿಗಳನ್ನು ಅಪೇಕ್ಷಿಸುವುದಿಲ್ಲ.

ತಂದೆಯು ದಿವಂಗತನಾದನೆಂಬ ಕೊರತೆಯು ಅಜನನ್ನು ಬಹಳವಾಗಿ ಬಾಧಿಸುತಲಿದ್ದಿತು, ಪರಮಾರ್ಥ ತತ್ತ್ವವನ್ನು ತಿಳಿದ ಪ್ರಾಜ್ಞರು ಅಜನನ್ನು ಕುರಿತು— “ಎಲೈ ಮತಿಯುತನಾದ ಮಹಾರಾಜನೆ! ನೀನು ಸಂಸಾರ ಭೂಮಿಯನ್ನು ಅರಿಯದವನಲ್ಲ, ನಿಮ್ಮ ತಂದೆಯು - ಧರ್ಮದಿಂದ ರಾಜ್ಯವನ್ನಾಳಿ, ಅನೇಕ ಸತ್ಕರ್ಮಗಳನ್ನಾಚರಿಸಿ, ಸತ್ಯವಂತನೆಂದು ಪ್ರಖ್ಯಾತನಾಗಿ, ಸುಪುತ್ರನಾದ ನಿನಗೆ ರಾಜ್ಯಭಾರವನ್ನೊಪ್ಪಿಸಿ, ಮುನಿವೃತ್ತಿಯಿಂದ ಮಹಾಯೋಗಿಗಳು ಪಡೆಯತಕ್ಕ ಶ್ರೇಷ್ಠತರವೆನಿಸಿದ ಮುಕ್ತಿಸಾಮ್ರಾಜ್ಯವನ್ನು ಪಡೆದು ಆನಂದಿಸುತಲಿರುವಲ್ಲಿ, ನೀನು ವ್ಯಥೆಪಡುವುದು ಧರ್ಮವಲ್ಲ ಶಾಂತನಾಗಿ ಸಂತೋಷದಿಂದ ಮುಂದಿನ ಕರ್ತವ್ಯಗಳನ್ನು ನಿರ್ವಹಿಸು” ಎಂಬಿವೇ ಮೊದಲಾದ ಸಮಾಧಾನ ವಚನಗಳನ್ನು ಹೇಳಿ, ಸ್ವಸ್ಥನಾಗುವಂತೆ ಮಾಡಿದರು. ದುಃಖಕ್ಕೆ, ಅದು ಹುಟ್ಟಿದಾಗ ಇದ್ದ ಶಕ್ತಿಯೇ ಯಾವಾಗಲೂ ಏಕರೀತಿಯಿಂದಿದ್ದರೆ, ಲೋಕವ್ಯವಹಾರವು ನಡೆಯುವುದುಂಟೆ? ಎಂದಿಗೂ ಆಗಲಿಕ್ಕಿಲ್ಲ. ಬಳಿಕ ದಿನ

ಕ್ರಮದಿಂದ ಅಜನಿಗೆ ಮನೋವ್ಯಥೆಯು ಕಡಮೆಯಾಯಿತು. ಬಳಿಕ ಬಿಲ್ಲಿನಲ್ಲಿ ಹೆದೆಯನ್ನೇರಿಸಿ ಎಲ್ಲೆಲ್ಲಿಯೂ ತನ್ನ ಆಣತಿಗೆ ಅಡ್ಡಿಯಿಲ್ಲದಂತೆ ಭೂಮಂಡಲವನ್ನೆಲ್ಲ ವಶಪಡಿಸಿಕೊಂಡು ಸಮಾಧಾನಸ್ಥಿತಿಗೆ ತಂದನು.

ಬಳಿಕ ಭೂಮಿಭಾಮಿನಿ, ಇಂದುಮತೀಕಾಮಿನಿ, ಇವರೀರ್ವರೂ-ಆ ಅಜನನ್ನು, ಮಹಾ ಪೌರುಷಸಂಪನ್ನನೂ, ಭೋಗಶಕ್ತಿಸಂಪನ್ನನೂ ಆಗಿರುವ ಪತಿಯನ್ನಾಗಿ ಪಡೆದು, ಮೊದಲನೆಯವಳು - ಮಹಾ ರತ್ನಜನನಿಯಾಗಿ ಕಂಗೊಳಿಸಿದಳು. ಎರಡನೆಯವಳು-ವೀರಕುಮಾರ ಮಾತೆಯಾಗಿ ಬೆಳಗಿದಳು. ದಶಶತಕಿರಣನಿಗೆಣೆಯೆನಿಸಿದವನು, ದಶದಿಶೆಗಳೊಳಗೂ ಹೆಸರುವಾಸಿಯನ್ನುಹೊಂದಿದವನು, ದಶಕಂಠಾರಿಯಗುರುವು, ದಶಪದದಿಂದೊಡಗೂಡಿದ ರಥಶಬ್ದವನ್ನು ಪಡೆದವನು, ಎಂದು ಯಾರನ್ನು ಬುಧರು ಯಾವಾಗಲೂ ಹೊಗಳುತಲಿರುವರೋ, ಆ ದಶರಥನನ್ನೇ ಅಜನು ಕುಮಾರನನ್ನಾಗಿ ಪಡೆದುದು. ಆಗ - ಅಧ್ಯಯನ, ಯಜ್ಞ, ಸಂತಾನ ಎಂಬಿವುಗಳ ಮೂಲಕ - ಋಷಿಗಳ, ದೇವತೆಗಳ, ಮತ್ತು ಪಿತೃಗಳ ಋಣಗಳಿಂದ ಅಜನು ಕ್ರಮವಾಗಿ ಬಿಡುಗಡೆಯನ್ನು ಹೊಂದಿದನು. ಸುತ್ತುಗಟ್ಟುವ ಪರಿವೇಷದಿಂದ ಹೊರಗೆಬಂದ ರವಿಯಂತೆ ರಾರಾಜಿಸಿದನು.

ಶ್ಲೋ॥ ವಿದ್ಯಾ ವಿವಾದಾಯ ಧನಂ ಮದಾಯ ಶಕ್ತಿಃ ಪರೇಷಾಂ
ಪರಿಪೀಡನಾಯ॥ಖಲಸ್ಯ, ಸಾಧೋರ್ವಿಪರೀತ ಮೇತತ್
ಜ್ಞಾನಾಯ ದಾನಾಯಚ ರಕ್ಷಣಾಯ ॥

ನೀಚನ ವಿದ್ಯೆಯು ವಿವಾದಕ್ಕೂ, ಹಣವು ಹೆಮ್ಮೆಗೂ, ಬಲವು ಪರರನ್ನು ಹಿಂಸಿಸಲಿಕ್ಕೂ ವಿನಿಯೋಗವಾಗುವುದು. ಇದು-ಸಾಧುವಿನ ವಿಷಯದಲ್ಲಿ ತಲೆಕೆಳಗಾಗುವುದು ; ಹೇಗೆಂದರೆ—ಸಜ್ಜನನ ವಿದ್ಯೆಯು-ಜ್ಞಾನಕ್ಕೂ, ದ್ರವ್ಯವು-ಕಾಲದೇಶವನ್ನರಿತು ಸತ್ಪಾತ್ರದಲ್ಲಿ ದಾನಕ್ಕೂ, ಶಕ್ತಿಯು-ಅಶಕ್ತರ ಸಂರಕ್ಷಣೆಗೂ ಸಾಧಕವಾಗುವುದು ಎಂಬದಾಗಿ ಹೇಳುವ ಹಿರಿಯರ ಮಾತು ಸಟೆಯಲ್ಲ; ಏಕೆಂದರೆ-ಆ ಅಜಭೂಪಾಲನ ಧನವು ಮಾತ್ರವೇ ಪರರಿಗೆ ಉಪಕರಿಸಲು ಸಾಧಕವೆನಿಸಿದುದಾಗಿರಲಿಲ್ಲ. ಪೌರುಷವು-ಆಪನ್ನರಾದವರ ಭಯವನ್ನು ಪರಿಹರಿಸಲಿಕ್ಕೇ ವಿನಿಯೋಗವಾಗುತಲಿದ್ದಿತು, ಶಾಸ್ತ್ರಜ್ಞಾನವು - ವಿದ್ಯಾವಂತರನ್ನು ಸತ್ಕರಿಸಲಿಕ್ಕೇ

ಉಪಯೋಗಿಸುತಲಿದ್ದಿತು, ಹೀಗೆ ಆತನ ಸುಗುಣಗಳೆಲ್ಲವೂ ಪರೋಪಕೃತಿಗಾಗಿಯೇ ವೆಚ್ಚವಾಗುತಲಿದ್ದುವು.

ಸತ್ಯವಂತನೆನಿಸಿದ ಆ ಅಜಮಹಾರಾಜನು - ತನ್ನ ನಾಡಿನ ಪ್ರಜೆಗಳನ್ನೆಲ್ಲ ಸಕಲ ವಿಷಯದಲ್ಲಿಯೂ ನೆಮ್ಮದಿಗೊಳಿಸಿ, ಸುಪುತ್ರನಾದ ದಶರಥನಲ್ಲಿ ರಾಜ್ಯಭಾರವನ್ನಿಟ್ಟು, ದೇವೇಂದ್ರನು-ಶಚೀದೇವಿಯೊಡನೆ ಅಮರಾವತಿಯ ಹತ್ತಿರದಲ್ಲಿರುವ ನಂದನವನದಲ್ಲಿ ಸಂಚರಿಸುವಹಾಗೆ, ಒಂದುವೇಳೆ-ತನ್ನ ಪಟ್ಟಮಹಿಷಿಯಾದ ಇಂದುಮತಿಯ ಸಂಗಡ ನಗರ ಸಮೀಪದಲ್ಲಿರುವ ಉದ್ಯಾನದಲ್ಲಿ ವಿಹರಿಸತೊಡಗಿದ್ದನು.

ಅನಂತರದಲ್ಲಿ- ವೀಣಾವಿನೋದರಸಿಕನೆನಿಸಿರುವ ದೇವರ್ಷಿಯಾದ ನಾರದನು - ದಕ್ಷಿಣ ಸಮುದ್ರತೀರದಲ್ಲಿ, ಗೋಕರ್ಣ ಕ್ಷೇತ್ರದೊಳಗೆ ನೆಲೆಗೊಂಡಿರುವ ಪರಮೇಶ್ವರನನ್ನು ಸೇವಿಸಬೇಕೆಂದು ಕುತೂಹಲಪಟ್ಟು ಸೂರ್ಯನುದಯಿಸುವ ಹಾದಿಯಿಂದ ಹೊರಟುಬರುತಲಿದ್ದನು. ಆ ದೇವಮುನಿಯ ವೀಣೆಯ ತುದಿಯು - ದೇವಲೋಕ ಕುಸುಮಗಳನ್ನು ಪೋಣಿಸಿ ರಚಿಸಿರುವ ದಿವ್ಯಹಾರದಿಂದ ಸುತ್ತಲ್ಪಟ್ಟಿದ್ದಿತು; ಆಗ - ಬಹು ವೇಗದಿಂದ ಹರಿದುಬರುತಲಿರುವ ವಾಯುವು - ಸುವಾಸನೆಯಿಂದ ತನ್ನನ್ನು ಸಿಂಗರಿಸಿಕೊಳ್ಳಲಿಕ್ಕೆಂಬಂತೆ, ಆ ದಿವ್ಯ ಪುಷ್ಪಮಾಲೆಯನ್ನು ಅಹಹ!! ಸೆಳೆದೊಯ್ದಿತು. ಮಾಲೆಯ ಕುಸುಮಗಳಮೇಲೆ ಹಾರಾಡುತ ದನಿಗೆಯ್ಯುತಲಿರುವ ದುಂಬಿಗಳಿಂದ ಆವರಿಸಲ್ಪಟ್ಟಿದ್ದ ಆ ಪರಿವಾದಿನಿಯು- ಪವನಾತಿಕ್ರಮವನ್ನು ತಾಳಲಾರದೆ, ಕಾಟಕೆಯಿಂದೊಡಗೂಡಿದ ಕಣ್ಣೀರಿನ ಹನಿಗಳನ್ನು ಬಟ್ಟಾಡಿಸುವಂತೆ ಕಾಣಬರುತಲಿದ್ದಿತು. ವಾಯುವೇಗ ವಶದಿಂದ ಹಾರಿಬಂದ ಆ ಅಮರಕುಸುಮಹಾರವು - ತನ್ನಲ್ಲಿರುವ ಮಕರಂದ ಸುವಾಸನೆಗಳ ವೈಭವದಿಂದ, ಆ ಉದ್ಯಾನದಲ್ಲಿನ ಲತೆಗಳಲ್ಲಿ ಋತುಧರ್ಮದ ಮೂಲಕ ಉಂಟಾಗಿರುವ ಪುಷ್ಪಸಮೃದ್ಧಿಯನ್ನು ತಿರಸ್ಕರಿಸುತ್ತಾ, ಅಜರಾಜನ ಪಟ್ಟದರಸಿಯ ಅಗಲವಾದ ಎದೆಯಲ್ಲಿ ಎಡೆಗೊಂಡಿತು. ಬಹು ಸುಂದರವೂ, ವಿಶಾಲವೂ ಆಗಿರುವ ಉರಸ್ಥಲಿಗೆ ನಿಮಿಷಕಾಲಮಾತ್ರ ಗೆಳತಿಯಂತಿರುವ ಆ ವಿಬುಧಕುಸುಮಮಾಲಿಕೆಯನ್ನು, ಕಟಾಕ್ಷಿಸಿದ ಕ್ಷಣದಲ್ಲಿಯೇ ಇಂದುಮತಿಯು - ಚಂದಿರನನ್ನು ರಾಹುವು ನುಂಗಲು,ಕೌಮುದಿಯಂತೆ ಮುಗಿದಳು. ಇಂದ್ರಿಯ ಸಮುದಾಯದಿಂದ

ಬಿಡಲ್ಪಟ್ಟ ಇಂದುಮತಿಯು - ಶರೀರದೊಡನೆ ನೆಲದಮೇಲೆ ಬೀಳುವಾಗ ಪತಿಯನ್ನು ಉರುಳಿಸಿದಳು, ಹೆಚ್ಚಿದ ಎಣ್ಣೆಯಿಂದುರಿಯುತ್ತಲಿರುವ ದೀಪದಿಂದ ಜ್ವಾಲೆಯು ಉದಿರುವಲ್ಲಿ, ತೈಲಬಿಂದುವೂ ನೆಲದಲ್ಲಿ ಬೀಳುವುದಲ್ಲವೆ ?

ಆಗ - ಪಕ್ಕದಲ್ಲಿನ ಕಮಲಾಕರದೊಳಗಿದ್ದ ಹಕ್ಕಿಗಳು - ಆ ದಂಪತಿಗಳ ಇಕ್ಕೆಲದಲ್ಲಿದ್ದ ಪರಿಜನರ ಘೋರವಾದ ಗದ್ಗಲದ ದೀನಸ್ವರದಿಂದ ಹೆದರಿ, ಅವರೊಡನೆ ತಾವೂ ಸಮಾನ ಶೋಕವುಳ್ಳವುಗಳಂತೆ ಗಟ್ಟಿಯಾಗಿ ಕೂಗಿಕೊಂಡುವು. ಬೀಸಣಿಗೆ, ತಣ್ಣೀರು ಮೊದಲಾದವುಗಳ ಉಪಚಾರದಿಂದ ಅರಸಿನ ಮೈಮರವೆಯು ಕಳೆಯಿತು, ಇಂದುಮತಿಯಾದರೆ ಮೆಯ್ಯನ್ನು ಮರತೇಬಿಟ್ಟಳು. ಆಯುಷ್ಯದ ಶೇಷವಿದ್ದರಲ್ಲವೆ ಪ್ರತಿಕ್ರಿಯೆಗಳು ಫಲಸಿದ್ಧಿಗೆ ಸಾಧಕಗಳಾಗುವುವು ? ಬಳಿಕ ಅಜನು-ಚೈತನ್ಯವು ಹಾರಿಹೋದುದರಿಂದ, ಕುದುರೆಯೆಂಬ ಅಡಿಯ ಚಕ್ಕೆಯು ಸಿಡಿದುಹೋಗಲು, ತಂತಿಗಳನ್ನು ಏರಿಸಿ ಕಟ್ಟಬೇಕಾಗಿರುವ ವೀಣೆಗೆ ಸಮಾನವಾದ ಸ್ಥಿತಿಯಲ್ಲಿರುವ ಪ್ರಿಯಪತ್ನಿಯನ್ನು, ಪ್ರೇಮಭರದಿಂದ ಪೂರ್ವದಲ್ಲಿ ಅಭ್ಯಾಸವಾಗಿದ್ದ ತನ್ನ ತೊಡೆಯಮೇಲೆ ಎರಡು ಕೈಗಳಿಂದಲೂ ಎತ್ತಿ ಮಲಗಿಸಿಕೊಂಡನು. ಆಗಲಾ ಅಜರಾಜನು - ಇಂದ್ರಿಯಗಳು ತೊಲಗಿದುದರಿಂದ ಕಳೆಗುಂದಿ, ತೊಡೆಯಮೇಲೆ ಮಲಗಿಸಿರುವ ಪತ್ನಿಯಿಂದ, ಬೆಳಗಿನ ಜಾವದಲ್ಲಿ ಮಲಿನವಾದ ಕಳಂಕರೇಖೆಯಿಂದೊಡಗೂಡಿರುವ ಚಂದ್ರಮನಂತೆ ಕಾಣಬರುತ್ತಿದ್ದನು.

ಅಯ್ಯೋ! ದೊರಗೆ ಸ್ವಾಭಾವಿಕವಾಗಿದ್ದ ಧೀರತೆಯೂ ಬಲು ದೂರವಾಗಿ ಹಾರಿಹೋಯಿತು, ಕಣ್ಣುಗಳಲ್ಲಿ ನೀರು ಉಕ್ಕಳಿಸಿತು, ಕೊರಳು ತೋರವಾಯಿತು, ನುಡಿಯು ತೊದಲಹತ್ತಿತು, ಹಂಬಲಿಸಿ ಅಳತೊಡಗಿದನು, ಬೆಂಕಿಯಿಂದ ಕಾಯ್ದ ಕಬ್ಬಿಣವೂ ಮೆತ್ತಗಾಗುವುದು, ದೇಹಧಾರಿಗಳು ಸಂತಪ್ತರಾದವರ, ಅವರ ಕಥೆಯನ್ನಿನ್ನು ಹೇಳಬೇಕಾದುದೇನು ?

ಬಲು ಸುಕುಮಾರಗಳೆನಿಸಿದ ಕುಸುಮಗಳೂ ಪ್ರಾಣಗಳನ್ನು ಸೂರೆಗೊಳ್ಳಲು ತಕ್ಕವುಗಳೆನಿಸಿದರೆ, ಹಾ ! ಕೊಲ್ಲಲುದ್ಯುಕ್ತನಾದ-ವಿಧಿಗೆ ಮತ್ತಾವ ಆಯುಧವು ಸಾಧಕವಾಗದೆ ಹೋಗುವುದು ? ಹಾಗಿಲ್ಲದಿದ್ದರೆ -

ಮೃತ್ಯುವು - ಮೃದುವಾದ ಪದಾರ್ಥವನ್ನು ಕೋಮಲವಾದ ವಸ್ತುವಿನಿಂದಲೇ ಕೊಲ್ಲಬೇಕೆಂದು ಗೊತ್ತುಮಾಡಿರುವನೋ ಹೇಗೋ ? ಆದರಿಂದಲೇ - ಹಿಮವು ಸುರಿಯುವುದರಿಂದ ತಾವರೆಯ ಬಳ್ಳಿಯು ಬಳಲುವುದು ಮೊದಲನೆಯ ಉದಾಹರಣೆಯಾಗಿಯೂ, ಕುಸುಮ ಸಂಪರ್ಕದಿಂದ ಇಂದುಮತಿಯ ಸಾವು ಎರಡನೆಯ ದೃಷ್ಟಾಂತವಾಗಿಯೂ ನನಗೆ ಕಾಣಬರುತಲಿವೆ. ಅಹಹಾ ! ಹೂವಿನ ಹಾರವೇ ಪ್ರಾಣಾಪಹಾರಿಯಾದರೆ, ಎದೆಯಮೇಲಿಟ್ಟರೂ ಅದೇ ನನ್ನ ಉಸಿರನ್ನೇಕೆ ಹಾರಿಸದೆ ಇದೆ? ದೇವರ ಸಂಕಲ್ಪದಿಂದ ಕೆಲವೆಡೆಗಳಲ್ಲಿ ಅಮೃತವು ವಿಷವಾಗಿಯೂ, ವಿಷವು ಅಮೃತವಾಗಿಯೂ ಪರಿಣಮಿಸಬಹುದಲ್ಲವೆ? ಅಥವಾ ವಿಧಿಯು-ನನ್ನ ದುರದೃಷ್ಟದಿಂದ ಸಿಡಿಲನ್ನು ಹೂವಿನ ಹಾರವನ್ನಾಗಿ ಕಲ್ಪಿಸಿರಬಹುದು. ಹಾಗಾದರೂ ಆ ಸಿಡಿಲಿನ ಒಡಿತವು - ಆಸರೆಯಾದ ಮರದಂತಿರುವ ನನ್ನನ್ನು ಕೆಡಹದೆ, ಹಬ್ಬಿದ ಬಳ್ಳಿಯಂತಿರುವ ಈ ಇಂದುಮತಿಯನ್ನೇ ಉರುಳಿಸಲು ಕಾರಣವೇನು ? ಓ ಪ್ರಿಯವಲ್ಲಭೆಯೇ! ನಾನು ಎಷ್ಟೋ ದೊಡ್ಡ ತಪ್ಪುಗಳನ್ನು ಮಾಡಿದಾಗಲೂ, ಒಂದು ವೇಳೆಯಲ್ಲಿಯೂ ನನ್ನನ್ನು ಅಸಡ್ಡೆಮಾಡಿ ಮಾತನಾಡಿಸದೆ ಸಿಟ್ಟುಗೊಂಡಿದ್ದವಳಲ್ಲವಲ್ಲಾ? ಅಂಥವಳೀಗ - ಯಾವುದೊಂದು ಅಪರಾಧವೂ ಇಲ್ಲದಿರುವ ಈ ನನ್ನನ್ನು ಮಾತನಾಡಿಸಲು ಅಯೋಗ್ಯನನ್ನಾಗಿ ತಿಳಿದಿರುವದೇಕೆ ? ಎಲೆ ಚೆಲ್ವಗಿಯ ಹೆಣ್ಣೇ! ಕೇಳಿ ಒಡಂಬಡಿಸದೆಯೇ, ಈ ಲೋಕವನ್ನು ಬಿಟ್ಟು ಪರಲೋಕವನ್ನು ಕುರಿತು ಹಿಂದುರುಗದಿರುವಂತೆ ತೆರಳಿದುದರಿಂದ ನೀನು ನನ್ನನ್ನು ಕಪಟಪ್ರಿಯನನ್ನಾಗಿಯೇ ತಿಳಿದಿದ್ದುದು ದಿಟ. ಸಂಶಯವೇ ಇಲ್ಲ. ಆಹಾ! ನಾನು ಕಳ್ಳನಾದೆನು ನೋಡಿದೆಯ? ಅಯ್ಯೋ ! ಈ ನನ್ನ ಹಾಳುಪ್ರಾಣವು - ಪ್ರಿಯವಲ್ಲಭೆಯನ್ನು ಹಿಂಬಾಲಿಸಿಯೇ ಹೊರಟುಹೋಗಿದ್ದಿತಿಲ್ಲಾ ? ಮರಳಿ ಅವಳನ್ನುಳಿದು ಹಿಂದಿರುಗಿ ಬರಲು ಕಾರಣವೇನು? ಯಾರು ಬರಹೇಳಿದರು?— "ಮಾಡಿದುದನುಣ್ಣೋ ಮಾರಾಯ" ಎಂಬಂತೆ, ಈಗ ತಾನಾಗಿ ಮಾಡಿಕೊಂಡ ಪ್ರಬಲವಾದ ಘಾತನೆಯನ್ನು ತಾನೇ ಅನುಭವಿಸಲಿ, ಸ್ವಯಂಕೃತಾಪರಾಧಕ್ಕೆ ಸೈರಣೆಯೇ ಶರಣಲ್ಲವೆ? ವನವಿಹಾರದ ಬಳಲಿಕೆಯಿಂದುಂಟಾದ ಬೆವರಿನ ಹನಿಯು ನಿನ್ನ ಮುಖದಲ್ಲಿ ಆರದೆ ಕಂಗೊಳಿಸುತಲಿದೆ, ಮತ್ತು

ನೀನೀಗಲೇ ಲೋಕಾಂತರವನ್ನು ಕುರಿತು ತೆರಳಿದ್ದೀಯೆ! ಛೀ! ಪ್ರಾಣಿಗಳ ಸಂಬಂಧವಾದ ಅಸಾರತೆಯನ್ನು ಬಲು ಹೀಯಾಳಿಸಬೇಕಾಗಿದೆ. ಓ ಪ್ರಿಯವಲ್ಲಭೆ! ನಾನು - ಇದುವರೆಗೆ ಹಿಂದೆ ಎಂದೂ ಮನಸ್ಸಿನಲ್ಲಿ ಕೂಡ ನಿನ್ನ ವಿಷಯದಲ್ಲಿ ಯಾವುದೊಂದು ಸ್ವಲ್ಪ ಕೆಡುಕನ್ನೂ ನೆನೆದವನಲ್ಲವಲ್ಲಾ? ಇಂತಹ ನನ್ನನ್ನು ಏಕೆ ತೊರೆಯಲೆಳಸುತ್ತಿರುವ? ನಾನು ನಾಮಮಾತ್ರದಿಂದ ಭೂಮಿಗೆ ಪತಿ ಎನಿಸಿಕೊಂಡಿದ್ದೇನೆ ? ಮನಃಪೂರ್ವಕವಾದ ಪ್ರೇಮವು ನಿನ್ನಲ್ಲಿಯೇ ನೆಲೆಗೊಂಡಿದ್ದಿತಲ್ಲ? ಅಯಿ ಸುಂದರಿ! ಇಂದುಮತಿ ! ಅಂದವಾಗಿ ಕಟ್ಟಿದ ಹೂವನ್ನು ಮುಡಿದಿರುವ ನಿನ್ನ ಶಿರದಿಂದ ಜೋಲಾಡುತ್ತ, ದುಂಬಿಯಂತೆ ಕಪ್ಪಾಗಿರತಕ್ಕ ಮುಂಗೂದಲನ್ನು ಅಲುಗಿಸುವ ಮೆಲ್ಲೆಲರು - ಮರಳಿ ನೀನು ಹಿಂದಿರುಗಬಹುದೆಂದು ನನ್ನ ಮನಸ್ಸನ್ನು ಶಂಕಿಸುವಂತೆ ಮಾಡುತಲಿವೆ. ಎಲೆ ಪ್ರಿಯಳೆ! ತಡಿಯಲ್ಲಿ ಬೆಳೆದಿರುವ ತೃಣಜ್ಯೋತಿಸ್ಸೆಯೆಂಬ ಜ್ಯೋತಿರ್ಲತೆಯು - ಹಿಮಗಿರಿಯ ಗವಿಯೊಳಗಣ ಕತ್ತಲನ್ನು ಕತ್ತರಿಸಿ, ಇರುಳು ಹೊತ್ತಿನಲ್ಲಿ ತನ್ನ ಬೆಳಕಿನಿಂದ ಬೆಳಗಿಸುವಹಾಗೆ, ನೀನು ಎಚ್ಚರಿನಿಂದ ನನ್ನ ಮನೋವ್ಯಥೆಯನ್ನು ಬೇಗನೆ ತೊಲಗಿಸಬಾರದೆ? ಚಲಿಸುತಲಿರುವ ಮುಂಗೂದಲನ್ನೊಳಗೊಂಡು, ಏನೊಂದನ್ನೂ ನುಡಿಯದಿರುವ ನಿನ್ನ ಮುಖವು - ಇರುಳು ಹೊತ್ತಿನಲ್ಲಿ, ಮುಗಿದಿರುವುದರಿಂದ ದನಿಗೆಯ್ಯದೆ ಒಳಗಡಗಿದ ಆರಡಿಯನ್ನುಳ್ಳ ಅಸಮಾನವಾದ ತಾವರೆಯಂತೆ ನನ್ನ ಮನವನ್ನು ಸಂತಾಪಗೊಳಿಸುತಲಿದೆ. ತೆರಳಿದ ಯಾಮಿನಿಯು ಮರಳಿ ಬರುವುದೆಂದು ಚಂದ್ರಮನೂ, ಅಗಲಿದ ಚಕ್ರವಾಕಿಯು ಪುನಃ ಸೇರುವುದೆಂದು ಬಡನಾಡಿಯಾದ ಜಕ್ಕನಕ್ಕಿಯೂ, ವಿರಹವೇದನೆಯನ್ನು ಸೈರಿಸಿರುವುದು ಲೋಕದಲ್ಲಿ ಸಂಗತವಾಗಿದೆ. ಎಂದೂ ಹಿಂದಿರುಗದಂತಹ ಪಯಣವನ್ನು ಬೆಳೆಸಿರುವ ನೀನು ನನ್ನನ್ನು ಸುಡದಿರುವುದುಂಟೆ ? ಪೂಸತನಿಸಿದ ತಳಿರ ಹಾಸಿನಲ್ಲಿಯೂ ಬಳಲಿ, ನೋವನ್ನು ತಾಳಲಾರದಿದ್ದ ಈ ನಿನ್ನ ಮೃದುವಾದ ಮೆಯ್ಯು, ಅಯ್ಯೋ! ಬಲು ಡೊಂಕಾಗಿಯೂ, ಕಠಿನವಾಗಿಯೂ ಇರುವ ಕಟ್ಟಿಗೆಯ ಗುಡ್ಡೆಯಾದ ಚಿತೆಯಮೇಲೆ ಪವಳಿಸೋಣವನ್ನೆಂತು ಸೈರಿಸಬಲ್ಲುದೋ ಹೇಳು? ಬಲು ಗುಟ್ಟಾದ ಹೊತ್ತಿನಲ್ಲಿಯೂ ನಿನ್ನನ್ನು ಅಗಲದ ಮೊದಲನೆಯ ಗೆಳತಿಯಾಗಿದ್ದ ಈ

ಮೋಹಿಲೆಯು - ಮರಳಿ ಎಚ್ಚರವಿಲ್ಲದಂತೆ ಮಲಗಿರುವ ನಿನ್ನನ್ನು ಅನುಸರಿಸಿ, ಮುಂದಯಾನವಿಲ್ಲದುದರಿಂದ ಮಾತನಾಡದೆ ಶೋಕಭಾರವನ್ನು ತಾಳಲಾರದೆ, ಸಂಗಡಲೇ ಮಡಿದುಹೋಗಿರುವಂತೆ ಕಾಣಬರುತಲಿದೆ. ಹಾ! ಎಲೆ ದಯಿತೇ! ದಿವಂಗತಳಾಗಬೇಕೆಂದು ಬಯಸಿದ ನೀನು - ಮುಂದೆ "ನನ್ನಗಲಿಕೆಯನ್ನು ತಾಳಿ ಇವನು ಬಾಳಲಾರನು" ಎಂದು ಮೊದಲೇ ಚಿಂತಿಸಿ, ಕನಿಕರಗೊಂಡು, ನನ್ನ ಪ್ರಾಣಧಾರಣೆಗೆ ಸಲಕರಣೆಗಳಾಗಿರುವಂತೆ ಹೆಂಗೋಗಿಲೆಗಳಲ್ಲಿ ನಿನ್ನ ಮಧುರ ಭಾಷಣವನ್ನೂ, ಕಲಹಂಸಿಗಳಲ್ಲಿ ಮಂದಗಮನವನ್ನೂ, ಹೆಣ್ಣು ಹುಲ್ಲೆಗಳಲ್ಲಿ ಅಂದವಾದ ನೋಟವನ್ನೂ, ಗಾಳಿಯಿಂದಲುಗುವ ಎಳೆ ಬಳ್ಳಿಗಳಲ್ಲಿ ಬೆಡಗುಗಳನ್ನೂ, ನೆಲೆಗೊಳಿಸಿದುದೇನೋ ನ್ಯಾಯವೇ ಸರಿ. ನಿನ್ನ ವಿರಹದಿಂದ ಹೇರಳವಾದ ನೋವನ್ನಾಂತಿರುವ ನನ್ನ ಮನವನ್ನು, ಅವು ನೆಲೆಗೆ ನಿಲ್ಲಿಸಲಾರವು, ಮತ್ತು - ನಿನ್ನಾ ಮನೋಹರ ಗುಣಗಳೆಡೆಗೊಟ್ಟು, ನನ್ನ ಪ್ರಾಣಹರಣಕ್ಕೇ ಸಲಕರಣೆಗಳೆನಿಸುವುವು. ಅಯ್ಯೋ, ಎಲೆ ಪ್ರಿಯೆ! ಈ ಹೂದೋಟದಲ್ಲಿ, ಇದಕೋ- ಈ ಸಿಹಿಮಾವಿನ ಗಿಡವನ್ನೂ, ಇದರಬಳಿ ಹಬ್ಬಿ ಬೆಳೆದಿರುವ ಪ್ರಿಯಂಗುಲತೆಯನ್ನೂ ದಂಪತಿಗಳೆಂದು, ಮಕ್ಕಳಿಗಿಮ್ಮಡಿಯಾದ ಮಮತೆಯಿಂದ ಬೆಳೆಯಿಸಿ, ಇವುಗಳಿಗೆ ವಿವಾಹ ಮಂಗಳವಿಧಿಯನ್ನು ನೆರವೇರಿಸದೆಯೇ ಲೋಕಾಂತರಕ್ಕೆ ತೆರಳಿದುದು ಯುಕ್ತವೆ? ತಾಯಿಸತ್ತ ತಬ್ಬಲಿ ಮಕ್ಕಳಿಗೆ ಸುಖವೆಲ್ಲಿಯದು? ನೀನು- ಪಾದೆಗಟ್ಟಿ, ಸೆಬ್ಬೆಯರಿತು ಗೊಬ್ಬರವಿಟ್ಟು, ನೀರೆರೆದು, ಸಾಕಿದ ಈ ಅಶೋಕಲತೆಯು - ಕುಸುಮವನ್ನು ತೋರುತಲಿದೆ. ನಿನ್ನ ಅಂದವಾದ ಮುಂದಲೆಗೆ ಮುಡಿಸಬೇಕಾದ ಈ ಹೂವನ್ನು, ನಿನಗೆ ಕೊಡುವ ತರ್ಪಣೋದಕದ ಸಂಗಡ ಅರ್ಘ್ಯವನ್ನಾಗಿ ಹೇಗೆ ಒಪ್ಪಿಸಲಿ? ಕಿವಿಗಿಂಪಾಗಿ ದನಿಗೈವ ಕಡಗಗಳ ದನಿಯನ್ನೊಳಗೊಂಡ ನಿನ್ನಡಿಯ ಅಸದಳವೆನಿಸಿದ ಅನುಗ್ರಹವನ್ನು ಪಡೆಯುತಲಿದ್ದ ಈ ಅಶೋಕಲತೆಯು ಕುಸುಮಗಳನ್ನು ನೋಡಿದರೆ, ಎಲೌ ಮಂಗಳಾಂಗಿ! ನಿನ್ನ ಅಗಲಿಕೆಯನ್ನು ತಾಳಲಾರದೆ ಶೋಕದಿಂದ ಕಣ್ಣೀರಿನ ಹನಿಗಳನ್ನು ತೊಟ್ಟಿಡಿಸುವಂತೆ ಕಾಣಬರುತಲಿದೆ. ಎಲೆ ಕಿನ್ನರಕಂಠಿ! ನಿನ್ನುಸಿರಿನ ಸುವಾಸನೆಯನ್ನಾಂತ ಪಗಡೆಯ ಹೂಗಳಿಂದ ಟೊಂಕಕ್ಕೆ ಸುತ್ತುವ ಮಂಗಳಮಾಲೆಯನ್ನು ನನ್ನೊಡನೆ

ಪೋಷಿಸುತಲಿದ್ದ ನೀನು - ಈಸರವು ಮುಗಿಯದೆ ಅರೆಯಾಗಿರುವಾಗಲೇ ತೊರೆದು, ಪರಲೋಕವನ್ನೈದಲು ನಿದ್ಗೈವುದು ತರವೆ? ಎಲೆ ಸಹೃದಯೆ! ನಿನ್ನ ಸುಖದಿಂದ ಸುಖಕ್ಕೂ, ದುಃಖದಿಂದ ದುಃಖಕ್ಕೂ ಪಾಲುಗಾತಿಯರಾಗಿರುವ ಈಗೆಳತಿಯರು, ಶುಕ್ಲ ಪಕ್ಷದ ಎಳೆಯ ಚಂದಿರನಂತೆ ಅಂದವಾದ ಈ ಮುದ್ದು ಕಂದನು, ನಿನ್ನ ಅನುರಾಗದೊಡನೆ ಬೇರೆನಿಸುವ ಈ ನಾನು, ನಿನಗಿಂತು ಜೀವನಸಹಾಯಗ್ರಿಯುದ್ದರೂ, ಇದನೆಲ್ಲ ಗಮನಿಸದೆಯೇ ತೊರೆದು, ತೆರಳಲೆಳಸಿದ ನಿನ್ನ ಮನವು ದಿಟವಾಗಿಯೂ ಬಲು ಕಠಿನವಾದುದೆಂದು ತಿಳಿಯಬೇಕಾಗಿದೆ. ಎಲೆ ಭಾಮಿನಿ! ಈಗ ನನ್ನ ಧೀರತೆಯು ಹಾರಿತು, ಪ್ರೀತಿಯು ಗತಿಸಿತು, ಆಟವು ಮೋಟಾಯಿತು, ಗೀತವು ಸೋತಿತು, ಹಬ್ಬವು ಮಬ್ಬಾಯಿತು, ಬಡವೆಯು ಕಡೆಗಂಡಿತು, ಶಯನವು ಬಯಲಾಯಿತು. ಓ ನನ್ನ ಸರ್ವಸ್ವವೇ! ನನ್ನ ಗೃಹಿಣಿಯು ನೀನು, ಬುದ್ಧಿಸಹಾಯವಾದ ಮಂತ್ರಿಯು ನೀನು, ರಹಸ್ಯದ ಸಖಿಯು ನೀನು, ಎಲೆ ಲಲಿತೆ! ಕಲಾಪ್ರಯೋಗದಲ್ಲಿ ಪ್ರಾಜ್ಞಳಾದ ಶಿಷ್ಯಳು ನೀನು, ಹೀಗೆ ಸರ್ವಭೋಗಸಾಧನವೂ, ಸರ್ವಾನಂದವೂ ಆಗಿದ್ದ ನಿನ್ನನ್ನು ಸೂರೆಗೊಂಡು, ಕರುಣಾಶೂನ್ಯನಾದ ಮೃತ್ಯುವು ಮತ್ತಾವ ನನ್ನ ಬಡವೆಯನ್ನು ಅಪಹರಿಸಲಿಲ್ಲವೋ ಹೇಳು. ಎಲೆ ಮದಿರಲೋಚನೆ! ನಾನು ಕುಡಿದುಳಿದ ಮಧುರವಾದ ಮಧುರಸವನ್ನು ಪಾನಮಾಡಿ, ನವಿಗಂಡ ನೀನು - ಪರಲೋಕದಲ್ಲಿರುತ್ತಾ, ಕಣ್ಣೀರಿನಿಂದೊಡಗೂಡುವಂತೆ ನಾನು ಕೊಡುವ ತಿಲೋದಕವನ್ನು ಮುಂದೆ ಕುಡಿವುದು ಹೇಗೆ? ಎಲೆ ಸುಮಂಗಲಿ! ಸಕಲೈಶ್ವರ್ಯವಿದ್ದರೂ ನೀನಿಲ್ಲದಿರುವುದರಿಂದ ಅಜನಿಗೆ ಸುಖವೆಂಬುದು ಇಲ್ಲಿಯವರಿಗೇ ಮುಗಿಯಿತು ಎಂದು ಎಣಿಸು. ಮುನ್ನು ನಿನ್ನೊಡನೆ ಅನುಭವಿಸದಿರುವುದು ಮತ್ತಾವುದೂ ಮುಂದೆ ನನಗೆ ಇನ್ನೆಂದಿಗೂ ಬದಗಲರಿಯದು. ನಿನ್ನನ್ನುಳಿದ ವಿಷಯಾಂತರಗಳು ಎಂತವುಗಳಾದರೂ ಅಜನಿಗೆ ರುಚಿಸವು. ಅಜನ ಭೋಗಸಾಧನಗಳೆಲ್ಲವೂ ಭೋಜನಂದನೆಯೇ ಅಲ್ಲದೆ ಬೇರಿಲ್ಲ.

ಕೋಸಲ ರಾಜನಾದ ಅಜನು - ಇಂತು ಬಹು ದೀನಸ್ವರದಿಂದ ಬಲು ಗಟ್ಟಿಯಾಗಿ ಮನಬಂದಂತೆ ಹಂಬಲಿಸಿ ಅಳುತ್ತಾ, ಉದಿರುತಲಿರುವ

ಮಕರಂದದ ಹನಿಗಳಿಂದ ಮಲಿನವಾದ ಮರಗಳನ್ನೂ ದುಃಖಿಸುತ್ತಲಿರುವುವುಗಳನ್ನಾಗಿ ಮಾಡಿದನು.

ಬಳಿಕ - ಬಂಧುವರ್ಗದವರು ಬಂದು, ಅಜನ ತೊಡೆಯಮೇಲೆ ಪವಳಿಸಿ, ಮರಣದಲ್ಲಿಯೂ ಬಹು ರಮಣೀಯವಾಗಿರುವ ಇಂದುಮತಿಯನ್ನು ಬಿಡದೆ ಬಲವಾಗಿ ಹಿಡಿದಿರುವ ದೊರೆಯ ಕರದಿಂದ ಬಲಾತ್ಕಾರವಾಗಿ ಬಿಡಿಸಿ, ಅವಳ ಎದೆಯಮೇಲಿದ್ದ ಅಮರಕುಸುಮಮಾಲೆಯನ್ನೇ ಅವಳಿಗೆ ಅಂತ್ಯಾಲಂಕಾರವನ್ನಾಗಿ ಆಚರಿಸಿ, ಅಗುರು ಚಂದನ ಮೊದಲಾದ ಕಾಷ್ಠಗಳ ಚಿತಿಯಲ್ಲಿನ ಅಗ್ನಿಗೆ ಆಹುತಿಯನ್ನಾಗಿ ಸಮರ್ಪಿಸಿದರು, "ಧೀರನಾಗಿದ್ದ ದೊರೆಯು ವಿವೇಕಿಯಾದರೂ ಶೋಕಕ್ಕೀಡಾಗಿ, ಮಡದಿಯೊಡನೆ ಮಡಿದುಹೋದನು" ಎಂಬ ಅಪಖ್ಯಾತಿಗೆ ಅಂಜಿ, ಅಜನು ಅರಸಿಯೊಡನೆ ತನ್ನ ಶರೀರವನ್ನು ಅಗ್ನಿಗೀಡುಮಾಡಲಿಲ್ಲ. ಅಷ್ಟೇಹೊರತು ಜೀವಿತದ ಆಶೆಯಿಂದಲ್ಲ.

ಆಮೇಲೆ - ವೀರಕ್ಷತ್ರಿಯನೂ, ಶಾಸ್ತ್ರಜ್ಞನೂ, ಸ್ವಧರ್ಮನಿರತನೂ ಆಗಿರುವ ಅಜನು - ಗುಣಗಳಿಂದ ಮಾತ್ರವೇ ಉಳಿದಿರುವ ಇಂದುಮತಿಯನ್ನು ಉದ್ದೇಶಿಸಿ ದಶಾಹದಮೇಲೆ ಮಾಡಬೇಕಾದ ವಿಧಿಗಳನ್ನೆಲ್ಲ ಸಮೃದ್ಧಿಯಿಂದ ಕ್ರಮವಾಗಿ ಪುರೋದ್ಯಾನದಲ್ಲಿಯೇ ಆಚರಿಸಿ ಮುಗಿಸಿದನು. ಹೀಗೆ ಇಂದುಮತಿಯನ್ನು ಕಳೆದುಕೊಂಡು, ಕ್ಷಣದೆಯು ಕಳೆಯಲು ಉಳಿದ ಚಂದಿರನಂತೆ ಕಾಣಬರುವ ಆ ಅಜನು - ತನ್ನ ಶೋಕದ ಕಡಲಿನ ಕಾಲುವೆಗಳನ್ನು ಪುರಸುಂದರಿಯರ ಕಣ್ಣುಗಳಲ್ಲಿ ನೋಡುತ್ತಾ, ಪುರಪ್ರವೇಶಮಂಗೈದನು. ಅದುವರೆಗೆ ಈತನ ಕುಲಗುರುವಾದ ವಶಿಷ್ಠಮುನಿಯು - ತನ್ನ ತಪೋವನದಲ್ಲಿ ಯಜ್ಞದೀಕ್ಷೆಯನ್ನು ಕೈಗೊಂಡಿದ್ದನು. ಅಜನ ನೆನಪು ಬಂದಿತು, ಧ್ಯಾನದೃಷ್ಟಿಯಿಂದ ನೋಡಿದನು, ಅಜನು ಅಕಾಲದಲ್ಲಿ ಆಪತ್ತಿಗೀಡಾದನೆಂಬ ಸಂಗತಿಯ ತತ್ತ್ವವು ಅರಿವಿಗೆ ಬಂದಿತು, ತನ್ನ ಪ್ರಿಯಶಿಷ್ಯನಸಂಗಡ ಹೇಳಿ ಕಳುಹಿಸಿದನು. ವಶಿಷ್ಠ ಮಹರ್ಷಿಯ ಅಂತೇವಾಸಿಯು-ಅಜನನಗರಿಗೈತಂದನು. ಮಹಾರಾಜನಂ ಕಂಡು, ಉಚಿತಸತ್ಕಾರವನ್ನು ಪಡೆದು ಆತನನ್ನು ಕುರಿತು ಇಂತೆಂದನು.—

ಎಲೈ ಮಹಾರಾಜನೆ! ತಪೋನಿಧಿಯು ಯಜ್ಞಾನುಷ್ಠಾನತತ್ಪರನಾ

ಗಿದ್ದನು. ನಿನ್ನ ತಾಪಕಾರಣವನ್ನು ತಿಳಿದಿದ್ದರೂ, ವಿಧಿಸಮಾಪ್ತಿಯು ನಡುವೆ ನಿನ್ನಬಳಿಗೆ ಬಂದು, ಸ್ವಭಾವದಲ್ಲಿ ಒದಲಾಯಿಸಿರುವ ನಿನ್ನನ್ನು ಪ್ರಕೃತಿಯಲ್ಲಿ ನೆಲೆಗೊಳಿಸಲು ಎಡೆಯಿಲ್ಲವಾಗಿದ್ದಿತು. ಎಲೈ ಸದಾಚಾರ ಸಂಪನ್ನನೆ! ಆತನು ಹೇಳಬೇಕಾದ ಮಾತುಗಳ ಸಂಗ್ರಹರೂಪವಾದ ಸರಸ್ವತಿಯು ನನ್ನಲ್ಲಿ ನೆಲೆಗೊಂಡಿದೆ. ಲೋಕವಿಖ್ಯಾತವಾದ ಧೀರತೆಯಿಂದೊಡಗೂಡಿರುವ ನೀನು - ಆ ವಚನಸಾರವನ್ನು ಗ್ರಹಿಸಲಿಕ್ಕೂ, ಹೃದಯದಲ್ಲಿ ಧರಿಸಲಿಕ್ಕೂ ತಕ್ಕವನಾಗಿದ್ದೀಯೆ. ತ್ರಿವಿಕ್ರಮ ಪ್ರಕ್ರಿಯೆಯನ್ನಾಂತ ಪುರಾಣಪುರುಷನಾದ ನಾರಾಯಣನ ಮೂರಡಿಗಳಿಗೆ ಡೆಕೊಟ್ಟ ಮೂಲೋಕದಲ್ಲಿಯೂ, ನಡೆದ, ನಡೆಯುತಲಿರುವ, ನಡೆದು ಹೋಗುವ ವಿಷಯಗಳನ್ನೆಲ್ಲ ಯೋಗನಿಧಿಯಾದ ಮುನಿಯು - ತಡೆಯಿಯಿಲ್ಲದ ಜ್ಞಾನದೃಷ್ಟಿಯಿಂದ ಕರತಲಾಮಲಕದಂತೆ ತಿಳಿಯಬಲ್ಲನಾದಕಾರಣ, ಆತನ ಮಾತುಗಳನ್ನು ವಿಶ್ವಸಿಸಬೇಕೆಂದು ಮರಳಿ ನಿನಗೆ ನಾನು ಹೇಳಬೇಕಾದುದಿಲ್ಲ,

ಪೂರ್ವದಲ್ಲಿ ತೃಣಬಿಂದುವೆಂಬ ಮುನಿಯು - ತನ್ನ ಆಶ್ರಮದಲ್ಲಿ ತೀವ್ರವಾದ ತಪಸ್ಸನ್ನು ಆಚರಿಸುತಲಿದ್ದನು. ಆಗ ತನ್ನ ಪದವಿಗೆಲ್ಲಿ ಕೊರತೆಯುಂಟಾಗುವುದೋ ಎಂದು ಹೆದರಿದ ಹರಿಹಯನು-ಆ ತಪಸ್ವಿಯ ಸಮಾಧಿಯನ್ನು ಭೇದಿಸಿ, ತಪಸ್ಸಿಗೆ ಭಂಗವನ್ನುಂಟುಮಾಡುವಂತೆ ಕಟ್ಟುಮಾಡಿ, ಹರಿಣಿಯೆಂಬ ಸುರಾಂಗನೆಯನ್ನು ಕಳುಹಿದನು. ಅದರಂತೆ ಹರಿಣಿಯು ತೃಣಬಿಂದುವಿನ ತಡಿಗೈದಿ ತನ್ನ ಕೈವಾಡವನ್ನು ತೋರತೊಡಗಿದಳು- ಶಾಂತಿಯೆಂಬ ಮರ್ಯಾದೆಯನ್ನೊಡೆದು, ತಪಸ್ಸಿಗೆ ಅಡ್ಡಿಯನ್ನೆಸಗುವ ಬಗೆಬಗೆಯ ಬೆಡಗುಗಳನ್ನು ತೋರುತ್ತಾ ಇದಿರಿಗೆ ನಿಂತಿರುವ ಆ ಅಮರರಮಣಿಯಾದ ಹರಿಣಿಯಂ ಕಂಡು-ಸಿಟ್ಟುಗೊಂಡ ಕಿತ್ತಡಿಯು—"ನೀನೀನೆಲದನಾರಿಯಾಗು" ಎಂದು ಶಪಿಸಿದನು. ಆ ಕೂಡಲೆ ಹೆದರಿದ ಹರಿಣಿಯು-ಎಲೈ ಭಗವಂತನೇ! ಈ ನಾನು ಪರತಂತ್ರಳು, ಪರಾಧೀನತೆಯಿಂದಾದ ಪ್ರತಿಕೂಲಾಚರಣೆಯನ್ನು ಕ್ಷಮಿಸಬೇಕು ಎಂದು ನೆಲದಮೇಲೆ ಅಡ್ಡಬಿದ್ದು, ಶರಣಾಗತಳಾಗಿ, ಕೈಜೋಡಿಸಿ ದೈನ್ಯದಿಂದ ಬೇಡಿದಳು. ಬಳಿಕ ಶಾಂತನಾದ ಮುನಿಯು-ದಿವ್ಯಪುಷ್ಪದರ್ಶನವೇ ಶಾಪಾವಧಿ, ಅದುವರೆಗೆ ಮಾನುಷಿಯಾಗಿರು ಎಂದು

ಅನುಗ್ರಹಿಸಿದನು. ಅದರಿಂದಲೇ ಕ್ರಥಕೈಶಿಕರಾಜರ ಮನೆತನದಲ್ಲಿ ಹುಟ್ಟಿ, ನಿನಗೆ ಪಟ್ಟದರಸಿಯಾಗಿರುತ್ತ, ಬಹುಕಾಲದಮೇಲೆ ಮಾರುತನ ಮೂಲಕ ಮುಗಿಲಿನಿಂದ ಜಾರಿಬಿದ್ದ ಶಾಪನಿವೃತ್ತಿ ಕಾರಣವಾಗಿದ್ದ ದೇವಕುಸುಮವಂ ಕಂಡು, ಕೂಡಲೆ ಮೈಮರೆತು ಧರೆಯನ್ನು ತೊರೆದಳು. ಅದುಕಾರಣ ಪ್ರಿಯಳಿಗೆ ಅಪಾಯವು ಸಂಭವಿಸಿತೆಂಬ ಕೊರತೆಯನ್ನಿನ್ನು ತೊರೆ. ಮತ್ತು - "ಜಾತಸ್ಯ ಹಿ ಧ್ರುವೋ ಮೃತ್ಯುಃ" ಹುಟ್ಟಿದವನಿಗೆ ಸಾವು ಸಿದ್ಧ ಎಂಬುದು ದಿಟ ಅದನ್ನು ನೀನು ಬಲ್ಲೆ, ಆದರೂ, ಪತ್ನಿಯಿಲ್ಲದವನಿಗೆ ಪ್ರಾಣಗಳಿಂದೇನು ಫಲ? ಎನ್ನಬೇಡ, ಧರೆಯನ್ನು ಧರ್ಮದಿಂದ ಪಾಲಿಸು, ಧರಾನಾಥರು ಧರಿತ್ರಿಯಿಂದಲೇ ಕಳತ್ರವಂತರು, ಅದರಿಂದ ನೀನು ಚಿಂತಿಸಬೇಕಾದುದಿಲ್ಲ. ಐಶ್ವರ್ಯದ ಏಳಿಗೆಯಲ್ಲಿಯೂ ಹೆಮ್ಮೆಗೆಡೆಗುಡದೆ, ನೀನು - ನಿನ್ನ ಆತ್ಮಜ್ಞಾನವನ್ನು ಪ್ರಕಟಿಸಿ ಇದ್ದೀಯೆ. ಮನಸ್ಸಿಗೆ ಜ್ವರವು ಸಂಭವಿಸಿರುವ ಈ ಸಮಯದಲ್ಲಿ ಭ್ರಾಂತಿಗೆಡೆಗೊಡದೆ ಆ ಪ್ರಜ್ಞೆಯನ್ನು ಧೀರತೆಯಿಂದ ಮರಳಿ ಪ್ರಕಾಶಗೊಳಿಸು. ವಿವೇಕಿಯು ಸರ್ವಾವಸ್ಥೆಗಳಲ್ಲಿಯೂ ಧೀರನಾಗಿರಬೇಕು. ಕಾರಣಾಂತರವನ್ನು ಕೇಳು—ಒಂದುವೇಳೆ ನೀನು ಬಲವಾಗಿ ಅಳತೊಡಗಿದರೆ ನಿನ್ನ ಪ್ರಿಯಳು ದೊರೆವಳೆ? ಅಥವಾ _ ಆಕೆಯಸಂಗಡ ನೀನೂ ಮೃತನಾದರೆ ಪತ್ನಿಯನ್ನು ಪಡೆಯಬಲ್ಲೆಯ? ಲೋಕಾಂತರದಲ್ಲಿ ಏಕೆ ಪಡೆಯಬಾರದು ಎಂಬೆಯೊ? ಪರಲೋಕಗತರಾದ ಪ್ರಾಣಿಗಳಿಗೆ ತಂತಮ್ಮ ಕರ್ಮಾನುಸಾರವಾಗಿ ಒದಗುವ ಭಿನ್ನದೇಹಗಳಿಂದ ಗತಿಯೂ ಬೇರುಬೇರು ಎಂಬುದೇ ದಿಟ, ಆದಕಾರಣ ಅಶೋಕನಾಗಿ ಕುಟುಂಬಿನಿಯನ್ನು ತರ್ಪಣಾದಿಗಳಿಂದ ತೃಪ್ತಿಗೊಳಿಸು, ಹಾಗಿಲ್ಲದಿದ್ದರೆ - "ಬಂಧುಜನರ ಸಂತತವಾದ ನಯನೋದಕವು ಮೃತರಾದವರನ್ನು ಸಂತಾಪಗೊಳಿಸುವುದು" ಎಂದು ಮನು ಮೊದಲಾದ ಮಹಾತ್ಮರೆಲ್ಲರೂ ಹೇಳುತ್ತಾರೆ. ಮತ್ತು - ಎಲೈ ಪ್ರಾಜ್ಞನೆ; ಶರೀರಿಗಳಿಗೆ ಮರಣವೇ ಸ್ವಾಭಾವಿಕವಾದುದು, ಪ್ರಾಣಧಾರಣವೆಂಬುದು ಅಕಸ್ಮಾತ್ತಾಗಿ ಸಂಭವಿಸತಕ್ಕುದು. ಎಂದರೆ ವಿಕೃತಿ ಎಂದು ವಿದ್ಯಾವಂತರು ಹೇಳುತ್ತಾರೆ. ಪ್ರಾಣಿಯು ಸ್ವಲ್ಪಕಾಲ ಜೀವಿಸಿ ಇದ್ದರೂ ಅದನ್ನೇ ಪರಮಲಾಭವೆಂದು ಸಂತೋಷಿಸಬೇಕು. ಸ್ವಭಾವವೆನಿಸಿದ ಮೃತಿಯಲ್ಲಿ ಸಂತಪಿಸಬಾರದು. ಅದರಿಂದ

ದುಗುಡವನ್ನು ತೊರೆ. ಲೋಕದಲ್ಲಿ ಮೂಢನಾದ ಮನುಜನು - ಇಷ್ಟವಾದ ವಸ್ತುವಿನ ವಿನಾಶವನ್ನು ಎದೆಯಲ್ಲಿ ನಟ್ಟ ಶಲ್ಯವನ್ನಾಗಿ ಭಾವಿಸುತ್ತಾನೆ. ಸ್ಥಿರಚಿತ್ತನು - ಆ ಪ್ರಿಯವಸ್ತು ವಿಯೋಗವನ್ನೇ ಹೃದಯದಲ್ಲಿ ನಟ್ಟಿದ್ದ ಮೊಳೆಯು ಕಳೆದುಹೋಯಿತೆಂದು ತಿಳಿಯುತ್ತಾನೆ. ಕುಶಲಕ್ಕೆ ಇದು ದ್ವಾರವೆಂತಲೂ ಭಾವಿಸುವನು. ವಿಷಯಲಾಭ ನಾಶಗಳು - ಕ್ರಮವಾಗಿ ಪಾಮರನಿಗೆ ಹಿತಾಹಿತ ಸಾಧನಗಳೆಂತಲೂ, ಪಂಡಿತನಿಗೆ ಅಹಿತಹಿತ ಸಾಧಕಗಳೆಂತಲೂ ಭಾವನೆಯುಂಟಾಗುವುದು. ಶರೀರ ಶರೀರಿಗಳಿಗೆ ಎಂದರೆ ತನ್ನ ದೇಹಾತ್ಮಗಳಿಗೇ ಸಂಯೋಗವಿಯೋಗಗಳು ಸಿದ್ಧವಾಗಿದ್ದು, ಅವುಗಳೇ ವಿದ್ವಾಂಸನಿಗೆ ವಿಷಾದವನ್ನುಂಟುಮಾಡದಿರುವಲ್ಲಿ, ಹೊರಗಿನದಾದ ಪುತ್ರಮಿತ್ರ ಕಳತ್ರಾದಿಗಳ ವಿರಹವೆಂಬುದೂ ಸಿದ್ಧವೆಂತಲೂ, ಸಂತಾಪಕರಗಳಲ್ಲವೆಂತಲೂ ಹೇಳಬೇಕಾದುದೇನು ? ಆದಕಾರಣ ಎಲೈ ಜಿತೇಂದ್ರಿಯಾಗ್ರಗಣ್ಯನೆ ! ಅಜ್ಞಜನರಂತೆ ಪ್ರಾಜ್ಞನಾದ ನೀನು - ಶೋಕಕ್ಕೆ ವಶನಾಗಬೇಡ. ತರುಗಿರಿಗಳೆರಡರಮೇಲೆಯೂ ಗಾಳಿಯು ಸಮಾನವಾಗಿ ಬೀಸುತಲಿರುವಲ್ಲಿ - ಆ ಎರಡೂ ಸಮವಾಗಿ ಚಲನಸ್ವಭಾವದವುಗಳೇ ಆಗಿದ್ದರೆ ಒಂದಕ್ಕೆ ಚಲವೆಂತಲೂ, ಮತ್ತೊಂದಕ್ಕೆ ಅಚಲವೆಂತಲೂ ಶಬ್ದಾರ್ಥಗಳ ತಾರತಮ್ಯವುಂಟಾಗುತಲಿದ್ದಿತೆ ? ತರುಗಳಂತೆ ಗಿರಿಗಳಿಗೂ ಚಲಸಂಜ್ಞೆಯು ಬರುತಲಿದ್ದಿತಲ್ಲವೆ? ಸ್ವತಃ ವಿವೇಕಶಾಲಿಯಾದ ನಿನಗೆ ಹೇಳಬೇಕಾದುದೇನಿರುವುದು? ಎಂದು ಹೇಳಿ ವಿರಮಿಸಿದನು.

ಅದನೆಲ್ಲ ಕೇಳಿದ ಅಜನು - ಕುಲಗುರುವಾದ ಜ್ಞಾನಧನನ ಅನುಜ್ಞೆಯನ್ನು ವಿಧೇಯತೆಯಿಂದ ಪರಿಗ್ರಹಿಸಿ, ಉಚಿತ ಪೂಜಾದಿಗಳಿಂದ ಮುನಿಶಿಷ್ಯನನ್ನು ಸತ್ಕರಿಸಿ ಕಳುಹಿಸಿಕೊಟ್ಟನು. ಆದರೆ-ಆ ವಚನಜಾತವು - ಶೋಕದಿಂದ ನಿಬಿಡವಾದ ಅಜನ ಹೃದಯದಲ್ಲಿ ಹೊಗಲೆಡೆಯಿಲ್ಲದೆ ಹಿಂತಿರುಗಿತೆಂಬಂತಿದ್ದಿತು. ಇಷ್ಟವಸ್ತುವಿಯೋಗ ದುಃಖದ ಶಕ್ತಿಯು ಇಷ್ಟೆಂದು ಹೇಳತೀರದು. ಅದೇನು ಸೃಷ್ಟಿವೈಚಿತ್ರ್ಯವೋ, ಮಾಯಾಬಲವೋ, ಮೋಹಪಾಶವೋ, ಅಥವಾಸ್ವಭಾವವೇನೋ ಹೇಳಲಳವಲ್ಲ.

ತದನಂತರದಲ್ಲಿ - ದಶರಥನು ಚಿಕ್ಕವನಾಗಿ, ರಾಜ್ಯಭಾರವನ್ನು ವಹಿಸಲು ಅಸಮರ್ಥನಾಗಿದ್ದುದರಿಂದ, ಸತ್ಯಸೂನೃತವಚನನಾದ ಅಜನು-

ಮತ್ತೆ ಎಂಟು ವರ್ಷಗಳ ಕಾಲವನ್ನು ಬಹು ಕಷ್ಟದಿಂದ ತಳ್ಳುತ್ತ ಬಂದನು, ಮತ್ತು -ಪ್ರಿಯವಲ್ಲಭೆಯಾದ ಇಂದುಮತಿಯ ವಿಯೋಗದಿಂದುಂಟಾದ ದುಃಖಭಾರವನ್ನು, ಆಕೆಯು ಹೋಲಿಕೆಯನ್ನು ಪಡೆದಿರುವ ವಸ್ತುಗಳ, ಭಾವಚಿತ್ರಗಳ, ಮತ್ತು ಸ್ವಪ್ನದಲ್ಲಿನ ಕ್ಷಣಿಕವಿಕಾರಗಳ ದರ್ಶನದಿಂದತಾಳುತಲಿದ್ದನು. ಆದರೆ - ಬಲವಾಗಿಯೇ ಕಟ್ಟಿರುವ ಮುಹಡಿಗಳಮೇಲೆ ಸಂದುಗಳಲ್ಲಿ ಮೊಳೆಯುತಕ್ಕ ಆಲ, ಅರಳಿ,ಮೊದಲಾದಗಿಡಗಳ ಮೊಳಕೆಯು- ಸೌಧತಲವನ್ನು ಬಲಾತ್ಕಾರವಾಗಿ ಭೇದಿಸುವಹಾಗೆ ಶೋಕಶಂಕುವು ಅಜನಹೃದಯುವನ್ನು ಭೇದಿಸಿತು. ಅಜನು ವೈದ್ಯರಿಗೆ ಅಸಾಧ್ಯವೆನಿಸಿದ ಆ ಶೋಕಶಲ್ಯವನ್ನು ಪ್ರಾಣನಾಶಕ್ಕೆ ಕಾರಣವಾಗಿದ್ದರೂ, ಪ್ರಿಯಾನುಗಮನತ್ವರೆಯ ಕುತೂಹಲದಿಂದ ಲಾಭವನ್ನಾಗಿಯೇತಿಳಿದನು.

ಆ ಮೇಲೆ ಅಜನೃಪನು - ಸ್ವಭಾವ ಸಂಸ್ಕಾರಗಳಿಂದ ವಿನಯುವಂತನಾಗಿ, ಕವಚಧಾರಣೆ ಸಮರ್ಥನೆನಿಸಿದ ದಶರಥ ಕುಮಾರನನ್ನು ರಾಜ್ಯರಕ್ಷಣಕಾರ್ಯದಲ್ಲಿ ವಿಧಿಯುಪ್ರಕಾರ ನೇಮಿಸಿದನು, ರೋಗಗ್ರಸ್ತವಾದ ತನ್ನ ಶರೀರವು ಸರ್ವಥಾ ಉಳಿಯುವುದಿಲ್ಲವೆಂದು ತೋರಿತು, ಆದುಷ್ಟಸ್ಥಿತಿಯನ್ನು ಶಾಸ್ತ್ರಪ್ರಕಾರ ಅನಶನವ್ರತದಿಂದ ತೊರೆಯಬೇಕೆಂದು ಬಯಸಿದನು, ಆಹಿಂದೆ - ಗಂಗಾ ಸರಯೂ ಸಂಗಮಸ್ಥಾನದಲ್ಲಿ ಸ್ಕಾಂದ ವಚನವನ್ನನುಸರಿಸಿ ದೇಹವನ್ನು ತ್ಯಜಿಸಿದನು, ಕೂಡಲೇ ಅಮರತ್ವವನ್ನು ಪಡೆದನು, ಪೂರ್ವಕ್ಕಿಂತಲೂ ಅಧಿಕತರವೆನಿಸಿದ ಕಾಂತಿಯನ್ನು ತಳೆದಿರುವ ಕಾಂತೆಯೊಡನೆ ಕಲೆತನು, ಅಮರೇಂದ್ರನ ನಂದನೋದ್ಯಾನದಲ್ಲಿಯೂ, ಕ್ರೀಡಾಭವನಗಳಲ್ಲಿಯೂ ಸುಖವಾಗಿ ವಿಹರಿಸುತಲಿದ್ದನು.

—ಇಂತು ಅಜವಿಲಾಪವೆಂಬ ಎಂಟನೆಯ ಸರ್ಗಂ—



# ಶುದ್ಧಪತ್ರ.

| ಪುಟ | ಪಙ್ಕ್ತಿ | ಶುದ್ಧ | ಅಶುದ್ಧ |
|---|---|---|---|
| ೪ | ೩ | ವತ್ಸಲರಾಗಿ | ವತ್ಸರಾಗಿ |
| ೩ | ೯ | ಸಂಪ್ರದಾಯವು | ಸಂಪ್ರದಾಟವು |
| ೮ | ೨೮ | ಗಿಡಗಳೊಳಗೆ | ಗಿಡಗಳೊಳಗ |
| ೧೨ | ೬ | ತನ್ನ | ತನ |
| ೧೫ | ೨೩ | | ಕಿಂತ |
| ೧೬ | ೧ | | ಪುದೆಂದು |
| ೧೭ | ೫ | | ಏಚತ್ತನು |
| ೨೦ | ೯ | | ಹುಲಿ |
| ೨೧ | ೧೦ | | ಟತು |
| ೨೩ | ೨೭ | | ಬಳಿ |
| ೨೫ | ೧೭ | | ನಿಸಿನ್ನಂದ |
| ೨೬ | ೨ | | ರತುತುನ |
| ೨೬ | ೭ | | ಎಲ್ಲ |
| ೨೯ | ೮ | | ಪಟ |
| ೩೧ | ೧೨ | | ರಾ ನಿ |
| ೩೨ | ೨೭ | | ಮನಸ್ಸಿದ |
| ೩೩ | ೫ | | ಜೊಡಸಿ |
| ೩೩ | ೨೬ | | ಬ ವೇ |
| ೩೩ | ೯ | ಆರಸಿತಿಯು | ಸತಿಯು |
| ೪ | ೩ | ಎಡೆಯೊಳಿಟ್ಟಿರುವ | ಎಡೆಯೊಳಟ್ಟರುವ |
| ,, | ೨೨ | ಗಮನಾರ್ಥದ | ಗಮನಾರ್ಥದ |
| ೩೫ | ೬ | ಅನ್ಯೋನ್ಯತೆಯಿಂದ | ಅನ್ಯೋನತೆಯಿದ |
| ,, | ೧೬ | ಮತ್ತು | ಮತ್ತುಂ |
| ೩೭ | ೩ | ಬೇಕೆಂದು | ಬೇಕಂದು |
| ೩೭ | ೯ | ಅರಳುತಲಿರುವ | ಅರಳುತಿಲಿರುವ |
| ೩೬ | ೨೮ | ನಾಗಿಯೋ | ನಾಗೆಯೊ |
| ೩೮ | ೬ | ಭಕುತಿಯಿಂದ | ಯಿಂನ |
| ೩೮ | ೧೬ | ಹತ್ತುನೂರು | ನೂರು |
| ೩೮ | ೧೦ | ತೆರೆದನು | ತರೆದನು |
| ೪೦ | ೧೯ | ಕತ್ತರಿಸಿದನು | ಕ್ತರಿಸಿದನು |

| ಪುಟ | ಪಙ್ತಿ | ಶುದ್ಧ | ಅಶುದ್ಧ |
|---|---|---|---|
| ೪೧ | ೫ | ಗೊಂಡಿರುವುದು | ಗೊಂಡರವುದು |
| ,, | ೨೮ | ಲಿದ್ದರು | ಏದರು |
| ೪೫ | ೧೫ | ಕಾಯಿ | ಕಾಯಿ |
| ೪೬ | ೧೨ | ಕಾವಲಿಟ್ಟನು | ಕಾವಲಿಟ್ಡನು |
| ೪೭ | ೧ | ನಾಣತಿ | ನಾಣೆತಿ |
| ೪೭ | ೩ | ಬೀದಿಗ | ಬೀದಿ |
| ,, | ೧೫ | ತಗ್ಗಿಸಿದ್ದು | ತಗ್ಸಿಸಿದ್ದು |
| ,, | ೧೬ | ದೊರೆಗಳು | ದೊರಗಳು |
| ೪೮ | ೧೬ | ರಘುರಾಜ | ರಾಘುರಾಜ |
| ೪೮ | ೧೬ | ರಘು | ರಾಘು |
| ೪೯ | ೧೩ | ವಾಗಿದ್ದ | ವಾಗಿದ |
| ೫೮ | ೨೫ | ಲಿಕ್ಕೆ | ಲಿ ಕ |
| ೫೮ | ೨೫ | ವಾದ | ನಾದ |
| ,, | ೨೮ | ಗ್ರಹಿಸಲ್ಪಟ್ಟಿಡೆ | ಗ್ರಹಿಸಲಿಟ್ಟಿದೆ. |
| ೫೯ | ೨೦ | ಹಣದಲ್ಲಿ | ಚಣದಲ್ಲಿ |
| ,, | ೨೭ | ಇಂತೆಂದನು | ಇಂತೆಂದುನೆ |
| ೬೪ | ೧ | ಪರಿಗ್ರಹಿಸಲಿ | ಪರಿಗ್ರಸಲಿ |
| ೬೬ | ೫ | ನಗೆಯಂತೆ | ನಗೆಯುಂತ |
| ೬೯ | ೧೩ | ಯನಾಗಿ | ಯಯಯಾಗಿ |
| ೭೫ | ೬ | ಸಕಲ | ಸಕಲಿ |
| ೭೭ | ೨೩ | ದರಿಂದ | ರರಿಂದ |
| ೮೦ | ೩ | ಈತ | ಇತ |
| ೮೨ | ೨೧ | ಗರುವು | ಗುರುವು |
| ೮೩ | ೨೮ | ಕಲೆಯಿತು | ಕೆಲೆಯಿತು |
| ೮೫ | ೨ | ನಾಥನಾದ | ನಾಥವಾದ |
| ,, | ೩ | ನೆರೆಏದ್ದ | ನೆರೆದಿವ್ದ |
| ೮೯ | ೬ | ಮೇಲೆ | ಮೆಲೆ |
| ೧೦೫ | ೧೮ | ಬೆಳ್ಳಗೆಯು | ಬೆಳ್ಳಗಜು |
| ೧೦೫ | ೨೪ | ವೇನು | ಮೆನು |
| ೧೦೮ | ೬ | ಸದ | ಸವ |
| ೧೦೮ | ೨೦ | ಮುಂದೆ | ಮುಂದ |
| ೧೧೧ | ೭ | ಸಿದ್ಧ | ಸಿದ್ದ. |